ಕನ್ನಡ ಚಲನಚಿತ್ರ-75-ಅಮೃತಮಹೋತ್ಸವ



# ಮಿನುಗಿ - ನಲುಗಿದ ಕಲ್ಪನಾ

ಲೇಖಕರು : ಡಾ. ವಿಜಯಾ ಸುಬ್ಬರಾಜ್



ಎಂದಿಗೂ ಮಿನುಗುವ ತಾರೆ

ಸಂಪಾದಕ : ಗೌರಿ ಸುಂದರ್

ಸುಂದರ ಪ್ರಕಾಶನ ಬೆಂಗಳೂರು - 560 019

ಚಿತ್ರರಂಗದ ದಿಗ್ಗಜರು
ಕನ್ನಡ ಚಿತ್ರರಂಗ – 75 ಅಮೃತಮಹೋತ್ಸವ

# ಮಿನುಗಿ–ನಲುಗಿದ ಕಲ್ಪನಾ


ಲೇಖಕರು
**ಡಾ. ವಿಜಯಾ ಸುಬ್ಬರಾಜ್**
ಅಪೂರ್ಣ ಮಾಹಿತಿ : ದಿ. ಕಲ್ಪನಾ

ಸಂಪಾದಕ
**ಗೌರಿಸುಂದರ್**



ಸುಂದರ ಪ್ರಕಾಶನ
ಚಿತ್ರಶ್ರೀ, 43, ಕಲಾಮಂದಿರ 6ನೇ ತಿರುವು
ಅ ನ ಸು ರಸ್ತೆ, ಹನುಮಂತನಗರ
ಬೆಂಗಳೂರು – 560019

**MINUGI - NALUGIDA KALPANA** - Biography
**KALPANA** by Dr. Vijaya Subba Rao Bangalore - 560 018.

| | | |
|---|---|---|
| copy right | : | Author |
| Published | : | **Sri Gauri Sunder**<br>**Sundara Prakashana**<br>'Chitrasri'-43,Kalamandir<br>5thCross, ANS Road,<br>Hanumantha Nagar<br>Bangalore - 560 019<br>Tel.:80-65623165,<br>9243125699 |
| Paper Used | : | 70 gsm Maplitho Paper |
| 1st Impression | : | 2009 |
| Copies | : | 1000 |
| Pages | : | 87 + 6 Pages |
| Price | : | **70/-** |
| DTP | : | Manjula - M 9743731350 |
| Printed at | : | Samrudha Offset Printers<br>121, 2nd Main, 11th Cross,<br>Vittal Nagar, Bangalore - 26.<br>Ph : 9880773027 |

## ಸುಂದರ ಪ್ರಕಾಶನದ ಗೌರವಾನ್ವಿತ ಸಲಹೆಗಾರರು

ಪ್ರೊ.ಜಿ.ವೆಂಕಸುಬ್ಬಯ್ಯ
ಪ್ರೊ.ಎಲ್.ಎಸ್.ಶೇಷಗಿರಿ ರಾವ್
ಶ್ರೀ ವಿಶ್ವೇಶ್ವರ ಭಟ್
ಶ್ರೀ ವಿ.ಎನ್. ಸುಬ್ಬರಾವ್
ಡಾ॥ ಚಂದ್ರಶೇಖರ ಕಂಬಾರ
ಶ್ರೀ ಸಿ.ಆರ್.ಸಿಂಹ
ಪ್ರೊ.ಕೆ.ಇ. ರಾಧಾಕೃಷ್ಣ
ಶ್ರೀ ಹೆಚ್.ಜಿ.ಸೋಮಶೇಖರ್ ರಾವ್
ಶ್ರೀ ಕೆ.ಎಸ್.ಎಲ್.ಸ್ವಾಮಿ (ರವೀ)
ಶ್ರೀಮತಿ. ಇಂದಿರಾ ಸುಂದರ್

## ಸಂಪಾದಕ ಮಂಡಳಿ

ಸಂಪಾದಕರು
ಶ್ರೀ ಗೌರಿ ಸುಂದರ್

### ಸದಸ್ಯರು

ಶ್ರೀ ಎಂ.ಎ.ವೆಂಕಟೇಶ್
ಶ್ರೀ ಎನ್.ಎಸ್.ಶ್ರೀಧರ ಮೂರ್ತಿ
ಶ್ರೀ ಎ.ಎಸ್.ಮೂರ್ತಿ
ಶ್ರೀ ಜಗನ್ನಾಥ ಬಹುಳೆ
ಶ್ರೀಮತಿ ಇಂದಿರಾ ಸುಂದರ್

### ಛಾಯಗ್ರಾಹಕರು

ಶ್ರೀ ಡಿ.ಸಿ.ನಾಗೇಶ್
ಶ್ರೀ ಕೆ.ಎಸ್.ನಾಗೇಶಕುಮಾರ್
ಶ್ರೀ ಮನು

# ಮುನ್ನುಡಿ

ಸುಂದರ ಪ್ರಕಾಶನದ ಶ್ರೀ ಗೌರಿಸುಂದರ್ ಅವರು ಕನ್ನಡ ಚಲನಚಿತ್ರದ ಅಮೃತ ಮಹೋತ್ಸವದ ಸಂದರ್ಭದ ಶಾಶ್ವತ ನೆನಪಿಗಾಗಿ 50 ಪುಸ್ತಕಗಳನ್ನು ಪ್ರಕಟಿಸುವ ಯೋಜನೆ ಹಾಕಿಕೊಂಡಿದ್ದಾರೆ. ಅಂದಿನಿಂದ ಇಂದಿನವರೆಗಿನ ಕನ್ನಡ ಚಿತ್ರರಂಗದ ಬೆಳವಣಿಗೆಗೆ ಕಾರಣರಾದ ಎಲ್ಲಾ ಕ್ಷೇತ್ರಗಳಲ್ಲಿ ದುಡಿದ, ಹಿರಿಯರು-ಕಿರಿಯರು ಎನ್ನದೆ, ಎಲ್ಲರೂ ನೀಡಿದ ಕಾಣಿಕೆಯನ್ನು ಮುಂದಿನ ಜನಾಂಗಕ್ಕೆ ದಾಖಲಾಗಿ ಒದಗಿಸುವ ಮಹತ್ತರ ಸಂಕಲ್ಪ ಅವರದು.

ಈ ಮಾಲಿಕೆಯಲ್ಲಿ ಪ್ರಕಟವಾಗುತ್ತಿರುವ "ಮಿನುಗಿ ನಲುಗಿದ ಕಲ್ಪನಾ" ಒಂದು ಮಹತ್ತರ ಕೃತಿ ಎಂದು ಹೇಳಬಹುದು. 1963ರಲ್ಲಿ ಚಿತ್ರರಂಗ ಪ್ರವೇಶಿಸಿ 1978ರವರೆಗೆ - ಹದಿನಾರು ವರ್ಷಗಳ ಅವಧಿಯಲ್ಲಿ - ಸುಮಾರು 70 ಚಿತ್ರಗಳಲ್ಲಿ ಅಭಿನಯಿಸಿದ ಕಲ್ಪನಾ ತನ್ನ ವಿಶಿಷ್ಟ ಅಭಿನಯದಿಂದ, ಮ್ಯಾನರಿಸಂನಿಂದ ಚಿತ್ರ ಪ್ರೇಮಿಗಳ ಮೆಚ್ಚುಗೆಯನ್ನು, ಅಭಿಮಾನವನ್ನು ಪ್ರೀತಿ ವಿಶ್ವಾಸಗಳನ್ನು ಗಳಿಸಿ ಕೊಂಡಿದ್ದವರು.

ಮಡದಿಯಾಗಿ, ಪ್ರೇಯಸಿಯಾಗಿ, ಮುಗ್ಧ ಹುಡುಗಿಯಾಗಿ ಫ್ಯಾಷನ್ ಹುಡುಗಿಯಾಗಿ, ಶೋಷಿತೆಯಾಗಿ ಹಲವಾರು ವೈವಿಧ್ಯಮಯ ಪಾತ್ರಗಳಲ್ಲಿ ತನ್ನನ್ನು ತಾನೇ ಕಳೆದುಕೊಳ್ಳುತ್ತಿದ್ದೆ ಕಲ್ಪನಾರದು ವರ್ಣರಂಜಿತ ಬದುಕು. ಅವರದೇ ಆದ ಒಂದು ಇಮೇಜ್ ಸೃಷ್ಟಿ ಮಾಡಿಕೊಂಡಿದ್ದ ಕಲ್ಪನಾ - ಮಿನುಗುತಾರೆ ಕಲ್ಪನಾ - ಶರಪಂಜರ ಕಲ್ಪನಾ - ಎಂದೆಲ್ಲಾ ಖ್ಯಾತರಾಗಿದ್ದರು. ತಮ್ಮದೇ ಆದ ವಿಶಿಷ್ಟ ಕೇಶಾಲಂಕಾರ, ವೇಷಾಲಂಕಾರ, ವಸ್ತ್ರಾಲಂಕಾರಕ್ಕೆ ಹೆಸರುವಾಸಿಯಾಗಿದ್ದರು.

ನಂತರದ ದಿನಗಳಲ್ಲಿ ಚಿತ್ರರಂಗದ ಅವಗಣನೆಗೆ ಗುರಿಯಾಗಿ ನಾಟಕ ಕ್ಷೇತ್ರಕ್ಕೆ ಪದಾರ್ಪಣೆ ಮಾಡಬೇಕಾಗಿ ಬಂದದ್ದು ವಿಧಿಯ ವೈಚಿತ್ಯವೆಂದೇ ಹೇಳಬಹುದು.

ಭಾವ ಪೂರ್ಣ ನಟಿಯಾದ ಕಲ್ಪನಾರ ಏಳುಬೀಳುಗಳನ್ನು, ಸಾಧನೆ ಸಿದ್ದಿಗಳನ್ನೂ ಆತ್ಮೀಯವಾಗಿ ಆಪ್ಯಾಯಮಾನವಾಗಿ ಚಿತ್ರಣ ಮಾಡಿದ್ದಾರೆ. ಡಾ॥ ವಿಜಯಾಸುಬ್ಬರಾಜ್ ಅವರು. ತಮ್ಮ ಅನುಭವಿ ಬರವಣಿಗೆಯ ವಿಶಿಷ್ಟ ಶೈಲಿಯಿಂದ ಕಲ್ಪನಾರವರು ಚಿತ್ರರಂಗದ ಪ್ರವೇಶವನ್ನು, ಗಳಿಸಿದ ಯಶಸ್ಸು, ನೋವು ನಲಿವುಗಳನ್ನು ತಮ್ಮದೇ ಆದ ತಂತ್ರಗಾರಿಕೆಯ ಬರಹದ ಶೈಲಿಯಲ್ಲಿ ರಚಿಸಿದ್ದಾರೆ.

ತೃತಿಯ ಆರಂಭದಲ್ಲಿ ತಮ್ಮ ನೆನಪಿನ ಕಲ್ಪನೆಯ ಚಿತ್ರಣದಿಂದ ಕಲ್ಪನಾಗೂ ತಮಗೂ ಇದ್ದ ಭಾಂದವ್ಯವನ್ನು ತೋಡಿಕೊಂಡಿದ್ದರೆ, ನಂತರ ಆಕೆಯು ಇವರಿಗೆ ನೀಡಿದ್ದ ಕಲ್ಪನೆಯ ಉಡುಗೊರೆಯ ದಿನಚರಿಯ ಮೂಲಕ. ಆಕೆಯ ಮಾತುಗಳಿಂದಲೇ ಆಕೆ ನಿರ್ವಹಿಸಿ ಪಾತ್ರಗಳ ಚಿತ್ರಣವನ್ನು ತೆರೆದಿಟ್ಟಿದ್ದಾರೆ.

ಕಲ್ಪನಾ ಅಭಿನಯಿಸಿದ ಶರಪಂಜರ, ಗೆಜ್ಜೆ ಪೂಜೆ, ಸರ್ವ ಮಂಗಳ, ಕರುಳಿನ ಕರೆ, ನಾರಿ ಮುನಿದರೆ ಮಾರಿ, ಕಪ್ಪು ಬಿಳುಪು ಚಿತ್ರಗಳ ನಾಯಕಿಯ ಪಾತ್ರ ಚಿತ್ರಣದಲ್ಲಿ ತಾನು ಪರಕಾಯ ಪ್ರವೇಶ ಮಾಡಿ ಅಭಿನಯಿಸಿದ ವಿವರವನ್ನೂ ಆಕೆಯ ಬಾಯಿಂದಲೇ ಬಂದಂತೆ ಸೊಗಸಾಗಿ ಚಿತ್ರಿಸಲಾಗಿದೆ.

ಒಂದು ಕಾಲದಲ್ಲಿ ಕಲ್ಪನಾರನ್ನು ಆರಾಧಿಸಿದ ಜನ 1978ರ ನಂತರದ ದಿನಗಳಲ್ಲಿ, ಅಭಿನಯಿಸುವ ಅವಕಾಶವಿಲ್ಲದಿದ್ದಾಗ, ಅವರನ್ನು ಕಂಡ ಬಗೆಯನ್ನು, ಕಲ್ಪನಾರ ನೊಂದ ನುಡಿಗಳಲ್ಲಿ ಚಿತ್ರಿಸಿರುವ ಲೇಖಕಿಯರ ಶೈಲಿ ವಿಭಿನ್ನವಾದುದು ಅನನ್ಯವಾದುದು.

ಅಸಂಖ್ಯ ಚಿತ್ತಸ್ಥಿತಿಗಳ–ವೈವಿಧ್ಯಮಯ ಸದಭಿರುಚಿಗಳ, ರೋಷ–ದ್ವೇಷಗಳ, ಬಿರುಸು ಬಿನ್ನಾಣಗಳ ಗಡಸು ಗಾಂಭೀರ್ಯಗಳ, ಕಠೋರಕ – ಮಾಧುರ್ಯಗಳ ಸಂಕೀರ್ಣ ಚೇತನವೆಂದು ಚಿತ್ರಿಸಿರುವ ಈ ಕೃತಿಯನ್ನು ರಚಿಸಿರುವ ಡಾ.ವಿಜಯಾ ಸುಬ್ಬರಾಜ್ ಹಾಗೂ ಪ್ರಕಾಶಿಸಿದ ಶ್ರೀ ಗೌರಿ ಸುಂದರ್ – ಇಬ್ಬರೂ ಅಭಿನಂದನಾರ್ಹರು.

–ಎನ್. ಆನಂದ ರಾಮರಾವ್

# ★ ಪಾತ್ರವಿಲ್ಲಿ ಸೂತ್ರವೆಲ್ಲೋ

ಇಂದು ಮೇ 13 ನನ್ನ ಪ್ರೀತಿಯ ಗೆಳತಿ ಕಲ್ಪನಾ ನಮ್ಮನ್ನೆಲ್ಲ ಅಗಲಿ ಸರಿಯಾಗಿ ಮೂವತ್ತು ವರುಷವಾಯಿತು. ಧುತ್ತನೆ ಅವಳ ನೆನಪಾಗುತ್ತಿದ್ದಂತೆ ಏನೋ ಒಂದು ಬಗೆಯ ಕಸಿವಿಸಿ. ಅವ್ಯಕ್ತವೇದನೆ. ಅವಳ ನೆನಪು ಇಂದೇಕೆ ನನ್ನನ್ನು ವಿಪರೀತ ಕಾಡುತ್ತಿದೆ? ನನ್ನಿಂದ ಏನನ್ನು ಬಯಸುತ್ತಾಳೆ? ಏಕೋ ಏನೋ ಅವಳ ಅತೃಪ್ತ ಆತ್ಮ ನನ್ನ ಸುತ್ತೆಲ್ಲ ಗಿರಕಿ ಹೊಡೆಯುತ್ತಿರಬಹುದೇನೋ ಎನಿಸುತ್ತದೆ. ನಾವು ಪ್ರೀತಿಸುವ, ಹಾಗೆಯೇ ಅವರನ್ನು ಪ್ರೀತಿಯ ಹಿನ್ನೆಲೆಯೊಂದಿಗೆ ಕಟುವಾಗಿ ಟೀಕಿಸುವ, ತಪ್ಪುಗಳನ್ನು ಮನಗಾಣಿಸಿ ತಿದ್ದುವ ಹಕ್ಕನ್ನು ಪಡೆದಿರುವಷ್ಟು ಹತ್ತಿರವಾಗಿರುವನ್ನು ಮಾತ್ರವೇ ನೆನಪುಗಳು ಇಷ್ಟೊಂದು ಕಾಡಬಹುದೇನೋ! ನಾನು ಕುಳಿತಿದ್ದ ಕುರ್ಚಿಯು ನೇರವಾಗಿ ಫ್ಯಾನಿನ ಕೆಳಗಿತ್ತು. ತಣ್ಣನೆಯ ಗಾಳಿ ಬರುತ್ತಿದ್ದರೂ ನನ್ನೊಳಗಿನ ಬಿಸಿ ಕಡಿಮೆಯಾಗಿರಲಿಲ್ಲ. ಅವಳ ಜೊತೆಗಿನ ದಿನಗಳು. ಕ್ಷಣಗಳು ನೆನಪಾದವು. ಹಾಗೆಯೇ ಅವಳು ಅಭಿನಯಿಸಿದ ಚಿತ್ರಗಳಲ್ಲಿನ ಪಾತ್ರಗಳು ಒಂದೊಂದೂ ನನ್ನ ಕಣ್ಮುಂದೆ ತೇಲಿ ಹೋದವು. ಎಷ್ಟೊಂದು ಪಾತ್ರಗಳು; ಸನ್ನಿವೇಶಗಳು; ಸಂದರ್ಭಗಳು; ಒಂದಕ್ಕಿಂತ ಒಂದು ಭಿನ್ನವಾದ, ವೈವಿಧ್ಯಮಯವಾದ ಪಾತ್ರಗಳಲ್ಲಿ ಕಾಣಿಸಿಕೊಳ್ಳುತ್ತಿದ್ದ ನನ್ನ ಗೆಳತಿಯ ಬದುಕಿನಲ್ಲಿನ ನಿಜವಾದ ಪಾತ್ರ ಯಾವುದೆಂದು ಗುರುತಿಸುವುದೇ ಒಂದು ದೊಡ್ಡ ಸವಾಲಾಗಿತ್ತು.

ನಗುವ, ಅಳುವ, ಕುಣಿವ, ನಲಿವ, ನುಲಿವ, ನಿಷ್ಠುರವಾಗಿ ನುಡಿದ, ನಡೆವ, ಸಿಟ್ಟಿಗೇಳುವ, ಸಮಾಧಾನವಾಗಿ ಕಾಣಿಸುವ, ಮುಗ್ಧಳಂತೆ ಬೀಗುವ, ಮೂರ್ಖಳಂತೆ ಕಾಣಿಸುವ, ಉದ್ಧಟಳಾಗಿ ವರ್ತಿಸುವ – ಇತ್ಯಾದಿ ಹತ್ತೆಂಟು ಚಹರೆಗಳಲ್ಲಿ ಕಾಣಿಸುವ ಇವಳ ಅಸಲಿ ಮುಖ ಯಾವುದು? ಅಸಲಿ ಪ್ರವೃತ್ತಿ ಯಾವುದು? –ಕಡೇ ಕ್ಷಣಗಳ ವರೆಗೂ ಯಾವುದೆಂಬುದನ್ನು ಹಿಡಿದು ಇಟ್ಟುಕೊಳ್ಳಲು ಸಾಧ್ಯವೇ ಆಗಲಿಲ್ಲ. ಎಂಥದೋ ವಿಚಿತ್ರ ಮನಸ್ಸು; ನಿಗೂಢ ವ್ಯಕ್ತಿತ್ವ.

ಎಷ್ಟೊಂದು ಸಲ, ಬೇಸರವಾದಾಗ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತಿದ್ದಾಳೆ. ಆ ಅಳುವಿನಲ್ಲಿ ಪ್ರಾಮಾಣಿಕತೆಯನ್ನು ಗುರುತಿಸಿದ್ದೇನೆ. ಆದರೆ ಎಲ್ಲರಿಗೂ ಅದರಲ್ಲಿ, ಅಂಥಾದ್ದರಲ್ಲಿ ಪ್ರಾಮಾಣಿಕತೆ ಕಾಣದೆ ಹೋಗಿರಬಹುದು. ಅವಳ ಒಡನಾಟ ಬಹಳ ಹತ್ತಿರದ್ದಾದ್ದರಿಂದ, ಬಹಳ ಕಾಲದ ಸ್ನೇಹವಾಗಿದ್ದುದರಿಂದ, ಅವಳನ್ನು ಸಮಗ್ರವಾಗಿ ಅರ್ಥಮಾಡಿಕೊಳ್ಳಬೇಕಾದರೆ ಅವಳ ಬದುಕನ್ನು ಎರಡು ನೆಲೆಗಳಲ್ಲಿ ಕಂಡುಕೊಳ್ಳಬೇಕಾದ್ದು ಅನಿವಾರ್ಯವೆನಿಸಿತ್ತು. ನನ್ನ ಅವಗಾಹನೆಗೆ, ಅರ್ಥಕ್ಕೆ ಸಿಕ್ಕಿದ್ದು ಒಂದು ಖಾಸಗಿ ಬದುಕು ಮತ್ತೊಂದು ಸಾರ್ವಜನಿಕ ಬದುಕು. ಸಾರ್ವಜನಿಕ ಬದುಕೆಂಬುದು ಎಲ್ಲರಿಗು ತಿಳಿದಂತೆ ಒಂದು ಓಪನ್‌ಬುಕ್. ಅವಳ ಮಾತು, ರೀತಿ, ವರ್ತನೆ, ಊಟ, ಉಪಚಾರ, ಬಟ್ಟೆ ಬರೆಗಳ ಆಯ್ಕೆ, ದೈಹಿಕವಾಗಿ ತನ್ನನ್ನು ಎಷ್ಟು ಸುಂದರವಾಗಿ ಕಾಣಿಸಬೇಕು ಎಂಬುದರ ಕಡೆಗಿನ ತುಡಿತ, ಸಭೆ ಸಮಾರಂಭಗಳಲ್ಲಿ ನಡೆದುಕೊಳ್ಳುವ ಶೈಲಿ – ಇತ್ಯಾದಿಗಳಿಂದ ಅವಳ ವ್ಯಕ್ತಿತ್ವದ ಚಿತ್ರವನ್ನು ಕಟ್ಟಿಕೊಳ್ಳುವುದು, ಅವಳ ಬಗ್ಗೆ ಅಭಿಪ್ರಾಯಗಳನ್ನು ಮೂಡಿಸಿಕೊಳ್ಳುವುದು ಸಹಜ ಮತ್ತು ಸಾಮಾನ್ಯ. ಆದರೆ ನಿಜವಾಗಿ ಅವಳು ಆಂತರಂಗಿಕವಾಗಿ ಎಲ್ಲಿ ಬದುಕಿದ್ದಾಳೆ, ಹೇಗೆ ಬದುಕಿದ್ದಾಳೇ ಎನ್ನುವುದು ಯಾರಿಗೂ ಬೇಡವೆನಿಸುತ್ತದೆ. ನನಗೂ ಕಾಣಿಸುವ, ಕಾಣಿಸಬಾರದೆಂದು ಬಚ್ಚಿಟ್ಟು ಬದುಕಿದ್ದರೂ ಇರಬಹುದು, ಎಂದು ಹಲವು ವೇಳೆ ಅನಿಸಿದ್ದುಂಟು. ಒಂದು ಸಲ ನಾನು ಅವಳಿಗೆ ಹೇಳಿದ್ದೆ ಕಲ್ಪನಾ ಅಂದು ಥಟ್ಟನೆ ಅವಳು ಕೊಟ್ಟ ಉತ್ತರ ಏನು ಗೊತ್ತೆ? 'ದಾವಿಸಿ, ನಮ್ಮದೆಲ್ಲವನ್ನೂ ಎಲ್ಲರಿಗು ಸುರಿದಿಟ್ಟು ಬಿಟ್ಟರೆ, ನನಗೆ ನಾನೇ ಖುಷಿ ಪಡಲೋ ನನ್ನೊಳಗೆ ನಾನೇ ಅತ್ತುಕೊಂಡು ಹಗುರಾಗಲೋ ನನ್ನದೆಂದೇ ನನ್ನ ಖಾಸಗಿತನವನ್ನು ನಿಕ್ಷಿಪ್ತ ನಿಧಿಯಂತೆ ಇರಿಸಿಕೊಳ್ಳದಿದ್ದರೆ ಅದರ ಮಜ ಏನಿರುತ್ತೆ! ಯಾರಿಗೂ ಊಹಿಸಿಕೊಳ್ಳಲಾಗದ ರೀತಿಯಲ್ಲಿ ಬದುಕಲೂ ಬೇಕು; ಸಾಯಲೂ ಬೇಕು'. – ಇದೇ ನನ್ನ ಆಸೆ – ಎಂದಿದ್ದಳು. ಅವಳು ಅಂದಕೊಂಡಂತೆ ಖಾಸಗಿತನದ



ನಿಗೂಢತೆಯೊಂದಿಗೆ ಬದುಕಿದಳು; ನಿಗೂಢತೆಯೊಂದಿಗೇ ಸಾವಿನ ಬೆನ್ನ ಹಿಂದೆ ಸಾಗಿದಳು.

ಇಷ್ಟಕ್ಕೂ ಅವಳು ಅಷ್ಟು ಬೇಗ ಸಾಯುವ ನಿರ್ಧಾರಕ್ಕೆ ಯಾಕೆ ಬಂದಳೆಂಬುದು, ಯಾರಿಗೂ ಅರ್ಥವಾಗದೆ ಹೋದ ಬ್ರಹ್ಮರಹಸ್ಯ. ಕೆಲವನ್ನು ಹೊರತು ಪಡಿಸಿ, ಎಲ್ಲವನ್ನೂ ನನ್ನಲ್ಲಿ ಹೇಳಿಕೊಳ್ಳುತ್ತಿದ್ದಳು. ಸಾಯುವುದಕ್ಕೆ ಒಂದು ತಿಂಗಳ ಮುಂಚಿನವರೆಗು ಗೆಲುವಾಗಿಯೇ ಇದ್ದಳು. ನನಗೆ ಬರವಣಿಗೆಯಿಂದ, ಪತ್ರಿಕಾ ಕೆಲಸಗಳಿಂದ ಬಿಡುವಾದಾಗ ಮತ್ತೆ ಅದೇ ಸಮಯದಲ್ಲಿ ಅವಳಿಗೂ ಯಾವುದೇ ಷೂಟಿಂಗ್ ಷೆಡ್ಯೂಲ್‌ಗಳು ಇಲ್ಲದಿದ್ದಾಗ, ಸಮಯದ ಪರಿವೆಯೇ ಇಲ್ಲದಂತೆ ತಾಸುಗಟ್ಟಲೆ ಹರಟುತ್ತಿದ್ದೆವು. ನಾನೂ ನನ್ನ ವೃತ್ತಿಯ ಜಾಣ್ಮೆಯಿಂದ ಕೆಲವಷ್ಟು ವಿವರಗಳನ್ನು ಬರ ಮಾಡಿಕೊಳ್ಳುತ್ತಿದ್ದೆ. ಅವಳೂ ತನ್ಮಯಳಾಗಿ ತನ್ನ ಅಂತರಂಗದ ಅಳಲನ್ನು ನಿಧಾನವಾಗಿ ತೊಟ್ಟಿಕ್ಕುವ ನೀರಧಾರೆಯಂತೆ ಹರಿಯ ಬಿಡುತ್ತಿದ್ದಳು. ಅದನ್ನು ಹೇಳಿಕೊಳ್ಳುವಾಗಲೂ ಎಂಥಾದ್ದೋ ತನ್ಮಯತೆ. ತನ್ನ ಆಸ್ತಿತ್ವವನ್ನು ಮರೆತು ತನ್ನ ನಿಗೂಢತೆಗಳನ್ನೂ ಜಾರಿಸಿ ಬಿಡುತ್ತಿದ್ದಳು. ನನಗೆ ಅದೆಲ್ಲ ಒಂದು ಕತೆಯಂತೆ ರೋಚಕವಾಗಿಯೂ ಒಮ್ಮೊಮ್ಮೆ ವಿಷಾದನೀಯವಾಗಿಯೂ ಭಾಸವಾಗುತ್ತಿತ್ತು. ನನ್ನೊಳಗೆ ಅನಿಸಿದ್ದು ಅವಳು ವಾಸನೆ ಹಿಡಿದು ಗ್ರಹಿಸಿಬಿಡುತ್ತಿದ್ದಳು. ನನ್ನ ಕುತೂಹಲ ನಾನು ಕೇಳುತ್ತಿದ್ದ ಪ್ರಶ್ನೆಗಳು ಅವಳ ಅನುಮಾನ ಹೆಚ್ಚಿಸಿದಂತೆ, ಕೇಳಿಯೇ ಬಿಡುತ್ತಿದ್ದಳು. "ದಾಮಿನಿ ನಿನ್ನ ಕತೆಗೆ ವಸ್ತುವಾಗುತ್ತೇನೆ? ನನ್ನ ಮೇಲೊಂದು ಕಾದಂಬರಿ ಬರೆಯುವ ಹಾಗಿದ್ದರೆ ಬರಿ. ಹೇಗಿದ್ದರು ನನಗೆ 'ಮಿನುಗುತಾರೆ' ಅಂತ ಬಿರುದುಕೊಟ್ಟಿದ್ದಾರಲ್ಲ. ಅದನ್ನೇ ಶೀರ್ಷಿಕೆಯಲ್ಲಿ ಇರಿಸು. ಜನ ನನಗೆ ಕೊಟ್ಟ ಅತ್ಯಂತ ಪ್ರೀತಿಯ, ಅಭಿಮಾನದ ಬಿರುದು.... ಅಂದ ಹಾಗೆ ದಾಮಿನಿ, ತಾರೆಗಳು ಭೂಮಿಯ ಮೇಲೆ ಇರಬಾರದಲ್ಲ? ನನಗಂತೂ ವಿಸ್ತಾರವಾದ ನೀಲಾಗಸದಲ್ಲಿ ಅಸಂಖ್ಯ ತಾರೆಗಳ ಮಧ್ಯೆ ಮಿನು ಮಿನುಗುತ್ತ ತಾರಾ ನಾಯಕಿಯಾಗಿ, ಚಿರಂತನವಾಗಿ ನೆಲೆಗೊಳ್ಳಬೇಕೆಂಬ ಹೆಬ್ಬಯಕೆ. ಆದರೆ ಅಲ್ಲಿಗೆ ಜಿಗಿಯುವುದಾದರೂ ಹೇಗೆ?...... ಗೊತ್ತೇನು? ದೇಹವನ್ನು ಇಲ್ಲಿಯೇ ಈ ಮಣ್ಣಿನಲ್ಲಿಯೇ ಎಸೆದು ಸ್ವಚ್ಚವಾದ. ಪವಿತ್ರವಾದ ಅಮೂರ್ತ ಆತ್ಮವಾಗಿ ಸಾಗಿ ಸೇರಬೇಕು. ಅಲ್ಲಿ?!" ಎಂದು ನಕ್ಕಿದಳು.

ಇವಳದು ಇದೆಂಥ ಬಯಕೆ! ತಿಳಿದು ಮಾತನಾಡುತ್ತಿದ್ದಾಳೆಯೇ, ಇಲ್ಲವೇ ಬರೀ ಜೋಕೋ!..... ಇಷ್ಟಕ್ಕೇ ನಿಲ್ಲದೆ ಒಮ್ಮೊಮ್ಮೆ ತತ್ವಜ್ಞಾನಿಯಂತೆ



ಮಾತಾಡುತ್ತಿದ್ದಳು. ಕೆಲವೊಮ್ಮೆ ಕವಿಯಂತೆ ಮಾತಾಡುತ್ತಿದ್ದಳು. ಅವಳು ಬಳಸುತ್ತಿದ್ದ ಶಬ್ದಗಳು, ಕೊಡುತ್ತಿದ್ದ ಹೋಲಿಕೆಗಳು, ಸಂಭಾಷಣೆಯಲ್ಲಿ ಸುಳಿದಾಡುತ್ತಿದ್ದ ವಿಚಾರಗಳು.... ಅವಳೊಳಗಿನ ಸೃಜನಶೀಲತೆಯನ್ನು ಹೊರಗೆಡಹುತ್ತಿತ್ತು. ಅನೇಕಸಲ ಅವಳ ಮಾತುಗಳು ಸ್ವಂತದ್ದೇ ಅಥವಾ ಯಾವುದಾದರೂ ಸಿನಿಮಾ ಡೈಲಾಗೇ! – ಎಂಬ ಅನುಮಾನ ಬರುತ್ತಿತ್ತು. " ಅ ಸಿನಿಮ, ನಾಟಕ ಅಂತ ಅಲೆದಾಡುತ್ತ, ಯಾವ ಯಾವುದೋ ಪಾತ್ರಗಳಲ್ಲಿ ನನ್ನನ್ನು ನಾನೇ ಕಳೆದುಕೊಳ್ಳುತ್ತಾ, ಕಡೆಗೆ ನಾನೇನೂ ಅಲ್ಲವಾಗಿ, ನನ್ನ ಅಸ್ತಿತ್ವವೇ ಇಲ್ಲವಾಗಿ, ನನ್ನ ವಾರಸುದಾರಿಕೆಯಾಗಿ ಉಳಿಸಲು ಏನೂ ಇಲ್ಲದಂತೆ ಆಗುವುದಕ್ಕಿಂತ ನಿನ್ನ ಹಾಗೆ ಬರಹಗಾರ್ತಿಯಾಗಿ ಇದ್ದಿದ್ದರೆ ಎಷ್ಟೊ ಚೆನ್ನಾಗಿತ್ತು. ಈಗಲೂ ನನಗೆ ಬರೆಯ ಬೇಕೆನಿಸುತ್ತೆ. ಆದರೆ ಬಿಡುವೆಲ್ಲಿದೆ? ಷೂಟಿಂಗ್, ಷೂಟಿಂಗ್! ಸದಾ ನನ್ನ ಮುಖವನ್ನೇ ಮರೆಮಾಚುವ ನನ್ನದಲ್ಲದ ಮುಖವಾಡಗಳಲ್ಲಿ ಬದುಕುವವಳು ನಾನು. ನನ್ನಿಚ್ಚೆಯಂತೆ ನಗುವುದಕ್ಕೆ, ಒತ್ತಿಸಿ ಬರುವ ದುಃಖದಲ್ಲಿ ಅಳುವುದಕ್ಕೆ ಅವಕಾಶವೇ ಇಲ್ಲದಂತೆ ಯಾರಯಾರದೋ ಭಾವವನ್ನು ಹೇರಿಕೊಂಡು ಎಲ್ಲೆಲ್ಲಿಯ ವಿಚಾರವನ್ನೋ ತುಂಬಿಕೊಂಡು ಯಾರು ಯಾರನ್ನೋ ಆವಾಹಿಸಿಕೊಳ್ಳುವ ತರಾತುರಿಯಲ್ಲಿ ನಾನೇನಾಗಬಹುದು? ನನ್ನದೇನಾಗಬಹುದು ದಾಮಿನಿ? ನನಗೆ ನೆನೆಸಿಕೊಂಡರೆ ಯಾವುದೋ ಭಯದ ಭೂತ ನನ್ನ ಕತ್ತು ಹಿಚುಕುತ್ತಿರುವಂತೆ ಭಾಸವಾಗುತ್ತದೆ. ನನ್ನೆದೆಯಲ್ಲಿ ಹೆಪ್ಪುಗಟ್ಟಿ ಕುಳಿತ ಭಾವನೆಗಳನ್ನು ಕರಗಿಸಿ ಹರಿಸುವ ದಿಕ್ಕು ಯಾವುದೆಂದು ದಿಕ್ಕು ತೋರದಾಗಿದೆ. ಹೀಗಿರುವಾಗ ನನಗೆಲ್ಲಿದೆ ಬರವಣಿಗೆ?..... ಹೋಗಲಿಬಿಡು ನನ್ನ ಗೆಳತಿಯಾಗಿ ನೀ ಇದ್ದೀಯಲ್ಲ! ಎಂದಾದರೊಮ್ಮೆ ನೀನೇ ನನ್ನ ಪರವಾಗಿ ಬರೆಯುವಿಯಂತೆ. ನನ್ನ ಸುಖ, ದುಃಖ, ಆಸೆ, ಆಕಾಂಕ್ಷೆ ನನ್ನ ನೋವು, ಹೋರಾಟಗಳು, ಸಿನಿಮಾ ಜಗತ್ತಿನ ನನ್ನ ಪ್ರಯಣ, ಎಲ್ಲಾ ನೀನೆ ಬೆರೆಯುವಿಯಂತೆ"–ಎಂದು ನಕ್ಕಳಾದರೂ ಆ ನಗುವಿನಲ್ಲಿ ಎಲ್ಲಿಯೋ ಒಂದಿಷ್ಟು ವಿಷಾದವಿದ್ದಂತೆ ಭಾಸವಾಗಿತ್ತು.

ಅದೆಲ್ಲಾ ಈಗ ನೆನಪಾಗುತ್ತಿದೆ. ಹೌದು ನಾನು ಬರೆಯಬೇಕು. ಆದರೆ ಅವಳ ಆಂತರ್ಯದ ಅನಿಸಿಕೆಗಳನ್ನು, ಸಣ್ಣವಳಿದ್ದಾಗಿನಿಂದ ಸಾವಿನ ಚಿತೆಯೇರುವವರೆಗೆ ನಡೆದ ಅವಳ ಬಾಳ ಪಯಣದ ನಿಲ್ದಾಣಗಳಾಗಲೀ, ಮುಖಾಮುಖಿಯಾದ ಸಂಘರ್ಷಗಳಾಗಲೀ. ಅವಳಿಗಾದ ಅನುಭವ ಆಘಾತಗಳಾಗಲೀ ನನಗೆ ತಿಳಿಯುವುದಾದರೂ ಹೇಗೆ? ಎಷ್ಟೇ ನನಗೆ ಹತ್ತಿರದವಳಾದರೂ ಎಡೆಬಿಡದೆ ಅಂಟಿಕೊಂಡಿದ್ದವಳಲ್ಲ. ನನಗೆ ನನ್ನ ವೃತ್ತಿ ಪ್ರವೃತ್ತಿಗಳಿವೆ. ಅವಳಿಗೆ ಅವಳದೇ ಆದ ಷೆಡ್ಯೂಲುಗಳಿವೆ. ಹೀಗಿರುವಾಗ ಅವಳ ಚರಿತ್ರೆಗೆ ಬೇಕಾದ ಅನುಕ್ರ---, ನಿರಂತರತೆಗಳನ್ನು ಎಲ್ಲಿಂದ ತರಲಿ? ಯೋಚಿಸಿದಷ್ಟೂ ಅವಳ ಬಾಳ ಸಂಗತಿಗಳನ್ನು ದಾಖಲಿಸುವುದು ಪ್ರಯಾಸದ ಕೆಲಸ ಎನಿಸಿತು. ನಾನು ಅವಳನ್ನು ತಿಳಿದುಕೊಂಡಿದ್ದೇನೆ, ಅರ್ಥಮಾಡಿಕೊಂಡಿದ್ದೇನೆ ಎಂದುಕೊಳ್ಳುವುದೂ ಸಾಧ್ಯವಿರಲಿಲ್ಲ. ಏಕೆಂದರೆ ಅವಳು ಅರ್ಥವಾಗಿದ್ದಾಳೆ ಎಂದುಕೊಂಡದ್ದಕ್ಕಿಂತ ಹತ್ತು ಪಟ್ಟು ಅರ್ಥವಾಗದ ರೀತಿಯಲ್ಲಿ ನಿಗೂಢವಾಗಿ ಉಳಿದುಬಿಟ್ಟಳು. ಇಂಥವಳನ್ನು ಕುರಿತು ಬರೆಯಬೇಕೆಂದರೂ ನನಗೆ ಸಾಧ್ಯವಾಗುತ್ತಿಲ್ಲವಾದರೂ ಬರೆಯಲೇ ಬೇಕೆನಿಸುತ್ತಿತ್ತು.

ಅಸಹಾಯಕತೆ, ಹತಾಶತೆಯಲ್ಲಿ ಕಣ್ಣು ಮುಚ್ಚಿ ಫ್ಯಾನಿನ ರೆಕ್ಕೆಗಳು ತಿರುಗುತ್ತಿರುವುದನ್ನೇ ನೋಡುತ್ತಿದ್ದೆ. ಒಂದೆರಡು ನಿಮಿಷ ಕಣ್ಣು ಮುಚ್ಚಿದೆ....ಒಂದು ಬಗೆಯ ಪ್ರಶಾಂತತೆ! ನೀರವತೆ!! ಅವಳ ಚಹರೆಯನ್ನು ಕಣ್ಣ ಮುಂದೆ ತಂದುಕೊಳ್ಳುತ್ತಿದ್ದೆ. ಎಷ್ಟೋ ಹೊತ್ತು, ಏನ್ನನ್ನೋ ಆವಾಹಿಸಿಕೊಳ್ಳುವ ಪ್ರಯತ್ನದಲ್ಲಿದ್ದೆ. ಕಣ್ಣು ಕತ್ತಲೆಯ ದಟ್ಟತೆಯಲ್ಲಿ ಫಳಕ್ಕನೆ ಬೆಳಕೊಂದು ಮೂಡಿತು.... ಅರೆ ಇದೆಲ್ಲಿಂದ ಬೆಳಕು ಎಂದು ಅಚ್ಚರಿ ಪಡುತ್ತಿರುವಷ್ಟರಲ್ಲಿ ಬೆಳಕಿಗೆ ಮುಖದ ಆಕಾರ ಬಂತು. ದಿಗ್ಭ್ರಾಂತಳಾಗಿ ನೋಡತೊಡಗಿದೆ. ದನಿಯಾಲಿಸತೊಡಗಿದೆ...ಆಮುಖ ..ಆ ದನಿ! ಅಚ್ಚರಿಯೋ ಅಚ್ಚರಿ!! ಅದು ನನ್ನ ಕಲ್ಪನಾಳದಾಗಿತ್ತು!!! 'ದಾಮಿನಿ ನಿನ್ನ ಚಿಂತೆ ನನಗೆ ಅರ್ಥವಾಗುತ್ತೆ. ನೆನಪಿದೆಯಾ ನಾನು ನಿನಗೊಂದು ಉಡುಗೊರೆ ಕೊಟ್ಟಿದ್ದೆ. ನಿನ್ನ ವಿವಾಹದ 5ನೇ ವಾರ್ಷಿಕೋತ್ಸವಕ್ಕೆ ಬಂದಿದ್ದಾಗ, ಅಮೂಲ್ಯವಾದ ಉಡುಗೊರೆ!! ನಿನ್ನ ಸಮಸ್ಯೆಗೆ ಅಲ್ಲಿ ಪರಿಹಾರ ಸಿಗುತ್ತೆ,"-ಎಂದಷ್ಟೇ ಹೇಳಿದ್ದೇ ಎಲ್ಲವೂ ಮರೆಯಾಯಿತು. ನಾನೆಲ್ಲೋ ಕನಸಿನಲ್ಲಿದ್ದಿರಬೇಕು. ಆ ಫ್ಯಾನಿನ ಸದ್ದು ಕೇಳಿಸುತ್ತಲೇ ಇತ್ತು. ಸ್ವಲ್ಪ ತಲೆ ಕೆರೆದುಕೊಂಡು, ಆ ಉಡುಗೊರೆಯ ಬಗ್ಗೆ ಆಲೋಚಿಸತೊಡಗಿದೆ.... ಥಟ್ಟನೆ ನೆನಪಿಗೆ ಬಂತು. ಅವಳು ಸತ್ತ ವರುಷ ಫೆಬ್ರವರಿ 28ರಂದು ನಮ್ಮ ಮದುವೆಯ 5ನೇ ವಾರ್ಷಿಕೋತ್ಸವ. ಬಿಡುವಿಲ್ಲದ

ಸಮಯದಲ್ಲಿಯೂ ನಾನು ಕರೆದ ಎಲ್ಲಾ ಸಭೆ, ಸಮಾರಂಭಗಳಿಗೆ ತಪ್ಪದೆ ಬರುತ್ತಿದ್ದಳು. ಅಂಥದ್ದರಲ್ಲಿ, ಅದೂ ಈಗ ಅಷ್ಟು ಬ್ಯೂಸಿ ಇಲ್ಲದ ಸಮಯದಲ್ಲಿ ಬರದೇ ಇದ್ದಾಳೆಯೇ? ಬಂದಳು. ಆದರೆ ಅವಳಲ್ಲಿ ಮೊದಲಿನ ಗೆಲುವಾಗಲೀ ಉತ್ಸಾಹವಾಗಲೀ ಇರಲಿಲ್ಲ. ಯಾವುದೋ ದುಗುಡದಲ್ಲಿ ಮುಳುಗಿದ್ದಿರಬೇಕು. ಮುಖ ಕಾಂತಿಹೀನವಾಗಿತ್ತು. ವಿಚಾರಿಸಲು ನನಗೂ ವ್ಯವಧಾನವಿರಲಿಲ್ಲ. ಬಂದವಳೇ ನಮ್ಮಿಬ್ಬರಿಗೂ ಶುಭ ಕೋರಿದಳು. ನನ್ನ ಕೈಗೆ ನೀಲಿ ಬಣ್ಣದ ––ಪೇಪರ್ ಸುತ್ತಿದ ಉಡುಗೊರೆ ಕೈಗಿತ್ತು. 'ದಾಮಿನಿ ಇದು ನನ್ನ ಅಂತರಾತ್ಮ ಇದನ್ನು ನೀನು ಬಿಡುವಾದಾಗ ಬಿಡಿಸಿ ಓದಿಕೋ". ಎಂದದ್ದರಿಂದ, ಯಾವುದೋ ಪುಸ್ತಕವಿರಬೇಕೆಂದು ಊಹಿಸಿದೆ. ಇದರಲ್ಲಿ ನನಗೆ ಆಶ್ಚರ್ಯವೆಂದೇನೂ ಎನಿಸಿರಲಿಲ್ಲ. ಯಾಕೆಂದರೆ ಅವಳಿಗೆ ಅತಿಯಾದ ಪುಸ್ತಕದ ಹುಚ್ಚು. ಒಳ್ಳೊಳ್ಳೆ ಪುಸ್ತಕಗಳನ್ನೆಲ್ಲಾ ಎಷ್ಟೇ ಬೆಲೆಯಾದರೂ ಕೊಂಡು ಸಂಗ್ರಹಿಸಿಟ್ಟುಕೊಳ್ಳುತ್ತಿದ್ದಳು. ಅವಳಲ್ಲಿ ಅದ್ಭುತವಾದ ಒಂದು ಗ್ರಂಥಾಲಯವೇ ಇತ್ತು. ಜೊತೆಗೆ ನನ್ನ ಪುಸ್ತಕದ ಹುಚ್ಚನ್ನು ಅರಿತಿದ್ದವಳು ಆಗಾಗ ನನಗೂ ಒಂದೊಂದು ಪ್ರತಿಯನ್ನು ಕೊಂಡು ನೀಡುತ್ತಿದ್ದಳು. ಬಹುಶಃ ಇದೂ ಕೂಡ ಅದೇ ರೀತಿಯಲ್ಲಿನ ಒಂದು ಪುಸ್ತಕದ ಉಡುಗೊರೆಯಾಗಿರಬೇಕೆಂದು ಸುಮ್ಮನಾದೆ.



ನನ್ನ ಹತ್ತಿರ ಬಂದು 'ಹೀಗೆಯೇ ಐವತ್ತನೇ ವರ್ಷದ ವಿವಾಹೋತ್ಸವವನ್ನು ಆಚರಿಸಿಕೋ. ಈ ಅದೃಷ್ಟ ನಿನ್ನ ಪಾಲಿಗೆ ಅನಂತವಾಗಲಿ. ಆದರೆ ನನಗೆ ಆ ಉತ್ಸವ ಸಮಾರಂಭಗಳಿಗೆ ಇನ್ನು ಮುಂದೆ ಬರುವುದಕ್ಕೆ ಬಹುಶಃ ಸಾಧ್ಯವಾಗದೆ ಹೋಗಬಹುದು ಯಾಕೆಂದರೆ ನನಗೆ ಯಾವುದು ಖಾತರಿಯಿಲ್ಲ. ಇರುತ್ತೇನೋ ಇಲ್ಲವೋ! ಇದ್ದರೂ ಎಲ್ಲಿಯೋ... ಹೇಳಲಾಗುವುದಿಲ್ಲ"–ಎಂದು ಮೆಲ್ಲಗೆ ಉಸಿರಿದ್ದಳು. ಆ ಕ್ಷಣದಲ್ಲಿ ಆ

ಮಾತುಗಳಿಗೆ ಹೆಚ್ಚಿನ ಅರ್ಥ ಕಾಣಿಸಿರಲಿಲ್ಲ. ಇದಾದ ನಂತರ ನಾನೂ ಕೆಲಸಗಳಲ್ಲಿ ತಲ್ಲೀನಳಾಗಿಬಿಟ್ಟೆ. ಆ ಉಡುಗೊರೆ ಬಗ್ಗೆಯೂ ಯೋಚಿಸಲು ಹೋಗಲಿಲ್ಲ. ಆದರೆ ಬಿಡುವಿರದಿದ್ದ ಕಾರಣ, ಅದನ್ನು ಅವಕಾಶವಿದ್ದಾಗ ನಿಧಾನವಾಗಿ ಬಿಡಿಸಿ ನೋಡೋಣವೆಂದು ಸುಮ್ಮನಾಗಿದ್ದೆ. ನಾನೂ ಅವಳು ಎಲ್ಲೋ ಒಂದೆರಡು ಸಲ ಫೋನಿನ ಮೂಲಕ ಮಾತಾಡಿದ್ದೆವು. ಅಷ್ಟೇ! ಅದೇ ಅವಳ ದನಿ ಕೇಳಿದ ಕಡೆಯ ದಿನವಾಗುತ್ತೆ ಎಂದು ನಂಬಿಯೇ ಇರಲಿಲ್ಲ.

ಮೇ (13)1979 ಬೆಳಗ್ಗೆ ಎದ್ದವಳೇ ಆಫೀಸಿಗೆ ಹೋಗಲು ತಯಾರಾಗುತ್ತಿದ್ದೆ. ಆ ದಿನ ಮನಸ್ಸಿಗೆ ಏನೋ ಕಸಿವಿಸಿ, ಸಂಕಟ, ಅವ್ಯಕ್ತ ಭೀತಿಯ ಅನುಭವ ಆಗಬಾರದ್ದೇನೋ ಆಗಲಿದೆಎಂದು ಒಳ ಮನಸ್ಸಿಗೆ ಹೊಳೆಯುತ್ತಿತ್ತು. ಆದರೂ ವಿಧಿಯಿಲ್ಲದೇ ಆಫೀಸಿಗೆ ಹೋದೆ. ಒಂದೆರಡು ಗಂಟೆಗಳು ಒಲ್ಲದ ಮನಸ್ಸಿನಿಂದ ಒಂದಷ್ಟು ಕೆಲಸ ಮಾಡಿದೆ. ನನ್ನ ಒಳಗಿನ ಆತಂಕ ಹೆಚ್ಚುತ್ತಿದ್ದಂತೆ, ಸುದ್ದಿಯ ಸಿಡಿಲು ಅನಿರೀಕ್ಷಿತವಾಗಿ ನನ್ನ ಮೇಲೆ ಎರಗಿತು. "ಮಿನುಗುತಾರೆ ಕಲ್ಪನಾ" ಆತ್ಮಹತ್ಯೆ ಮಾಡಿಕೊಂಡಿದ್ದಾಳೆ"... ನನ್ನ ಕಿವಿಗಳನ್ನೇ ನನಗೆ ನಂಬಲಾಗಲಿಲ್ಲ. ಛೇ! ಇದೆಂಥಾ ಸುದ್ದಿ! ಅವಳು ಸಾಯುವುದೆಂದರೇನು? ಇದೆಲ್ಲಾ ಊಹಾಪೋಹಗಳಿರಬೇಕು; ಸುಳ್ಳು ಸುಳ್ಳು ಹರಡುತ್ತಿರುವ ವದಂತಿಗಳಿರಬೇಕು. ಎಂದು ನನಗೆ ನಾನೇ ಸಮಧಾನ, ಸಮರ್ಥನೆ ಮಾಡಿಕೊಳ್ಳುತ್ತಿದ್ದರೂ ಒಳಗೆಲ್ಲೋ ಇದು ನಿಜವಿದ್ದರೂ ಇರಬಹುದೇ?– ಎನ್ನುವ ಅನುಮಾನ. ನಂಬುವುದಕ್ಕೆ ಒಲ್ಲದ ಮನಸ್ಸು. ಆದರೂ ನನ್ನ ಸಹೋದ್ಯೋಗಿ ವಲಯದಲ್ಲಿ ಗುಜುಗಜು ಶುರುವಾಯಿತು. ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಅವಳ ಸಾವಿಗೆ ಕಾರಣಗಳನ್ನು ತಮ್ಮದೇ ರೀತಿಯಿಂದ ಸಮರ್ಥಿಸಿಕೊಳ್ಳುತ್ತಿದ್ದರು. ನನಗೆ ಇನ್ನೊಂದು ಕ್ಷಣವೂ ಅಲ್ಲಿರಲು ಸಾಧ್ಯವಾಗಲಿಲ್ಲ. ಖುದ್ದಾಗಿ ಈ ಸುದ್ದಿಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳಬೇಕಾಗಿತ್ತು. ಆಫೀಸಿನಿಂದ ಫೋನು ಮಾಡುವುದು ಬೇಡವೆಂದು ಮನೆಯ ಕಡೆ ಹೊರಟೆ. ಹೋದವಳೇ ನನ್ನ ಬ್ಯಾಗನ್ನು ಮಂಚದ ಮೇಲೆ ಎಸೆದು ಅವಳ ಮನೆಗೆ ಕರೆ ಮಾಡಿದೆ. ಯಾರೂ ಉತ್ತರಿಸಲಿಲ್ಲ. ನಿಜವಾಗಿ ವಿಷಯ ಏನೆಂದು ತಿಳಿಯಬೇಕಾದರೆ ಪ್ರತಿಭಾ ಸಿನಿ ಪತ್ರಿಕೆಯವರನ್ನು ಸಂಪರ್ಕಿಸಲು ಪ್ರಯತ್ನಿಸಿದೆ. ಅದೃಷ್ಟಕ್ಕೆ ಕೂಡಲೇ ಫೋನಿನಲ್ಲಿ ಅವರ ಸಂಪರ್ಕ ಸಾಧ್ಯವಾಯಿತು. ವಿಚಾರಿಸಿದೆ. "ಮೇಡಂ ನಾನು ಕಲ್ಪನಾರ ವಿಚಾರವಾಗಿ ಕೇಳಿದ ಸುದ್ದಿ ನಿಜವೇ?--ಎಂದೆ. ಕಲ್ಪನಾಳ ಖಾಸಗಿ ವಲಯದ ಗೆಳತಿಯರಲ್ಲಿ ಪ್ರತಿಭಾ ಕೂಡಾ ಒಬ್ಬರಾಗಿದ್ದರು. ಅನೇಕ

ಸಲ ನಾನೂ ಅವರನ್ನು ಭೇಟಿಯಾಗಿದ್ದೆ. ಮಾತಾಡಿದ್ದೆ. ಕಲ್ಪನಾಳನ್ನು ಕುರಿತು ನಾವು ಮಾತನಾಡಿಕೊಂಡದ್ದೂ ಉಂಟು. ಅವರನ್ನು ಮಾತನಾಡಿಸಿದ ಮೇಲೆ, ಕೇಳಿದ ಸುದ್ದಿ ನಿಜವೆಂದು ತಿಳಿಯಿತು. ಆದರೆ ಕೂಡಲೇ ಹೋಗುವುದು ಸಾಧ್ಯವಾಗಿರಲಿಲ್ಲ. ಕಲ್ಪನಾ ಸಿನಿಮಾದಲ್ಲಿನ ಬೇಡಿಕೆಗಳು ಕಡಿಮೆಯಾದಂತೆ ಮತ್ತೆ ಮರಳಿ ರಂಗಭೂಮಿಗೆ ತೆರಳಿದ್ದಳು. ಮೊದಲಿನಿಂದಲೂ ಅವಳ ಪ್ರಥಮ ಆದ್ಯತೆ ಮತ್ತು ಆಯ್ಕೆ ನಾಟಕಗಳೇ ಆಗಿದ್ದವು. ಅವಳ ದೃಷ್ಟಿಯಲ್ಲಿಅಭಿನಯದ ನೈಜ ಪ್ರತಿಭೆ ಜೀವಂತ ರಂಗಭೂಮಿಯ ಮೇಲೆ ಮಾತ್ರ ಸಾಧ್ಯ. ಸಿನಿಮಾ ನಮ್ಮ ಪ್ರತಿಬಿಂಬಗಳೇ ಹೊರತು ನಾವಲ್ಲ. ತುಂಡು ತುಂಡಾಗಿ ಮಾಡುವ ಅಭಿನಯದಲ್ಲಿ ಭಾವನೆಗಳ ನಿರಂತರತೆ ಹೇಗೆ ತಾನೇ ಸಾಧ್ಯ? ಎಂಬುದು ಅವಳ ಪ್ರಶ್ನೆ ಆಗಿತ್ತು. ಹೀಗಿರುವಾಗ ಮತ್ತೆ ಮರಳಿ ರಂಗಭೂಮಿಗೆ ಹೋದದ್ದು ನನಗೇನೂ ಆಶ್ಚರ್ಯವಾಗಿರಲಿಲ್ಲ. ಸಂಕೇಶ್ವರಕ್ಕೆ ನಾಟಕಗಳಲ್ಲಿ ಅಭಿನಯಿಸಲು ಹೋದ ವಿಷಯ ಮಾತ್ರ ನನಗೆ ತಿಳಿದಿರಲಿಲ್ಲ. ಅವರಿವರು ಮಾತಾಡಿಕೊಂಡಿದ್ದರ ರೀತಿ ಗುಡಗೇರಿಯ ಎನ್.ಬಸವರಾಜರ ಶ್ರೀ ಸಂಗಮೇಶ್ವರ ನಾಟಕ ಸಂಘದ ನಾಟಕಗಳಲ್ಲಿ ಪಾತ್ರವಹಿಸಲು ಹೋಗಿದ್ದಳಂತೆ. ಆದರೆ ಮೇ13ರಂದು, ಬೆಳಗ್ಗೆ 10ಗಂಟೆಯ ಸುಮಾರಿಗೆ, ತನಗೇಕೋ ಆರಾಮಿಲ್ಲ. ಏನೋ ಬಳಲಿಕೆ, ಬೇಸರ. ನಾಟಕದಲ್ಲಿ ಭಾಗವಹಿಸಲು ಆಗದ ನಿಶ್ಯಕ್ತಿ ಎನಿಸುತ್ತಿದೆ. ಆದ್ದರಿಂದ ಸದ್ಯಕ್ಕೆ ಒಂದೆರಡು ಗಂಟೆಗಳ ವಿಶ್ರಾಂತಿ ಪಡೆದು ನಂತರ ಬರುತ್ತೇನೆಂದು ಕೋಣೆಯಲ್ಲಿಯೇ ಉಳಿದುಕೊಂಡಳಂತೆ, ಅವಳ ಈ ನಡೆಯೆಲ್ಲವೂ ಸಹಜವೇ ದಣಿವು ಅನಾರೋಗ್ಯಗಳು ಯಾರನ್ನಾದರೂ ಕಾಡಬಹುದು. ಆದ್ದರಿಂದ ಕಲ್ಪನಾಳ ಬಯಕೆ ಯಾರಿಗೂ ಒಂದಿಷ್ಟೂ ಅನುಮಾನಕ್ಕೆ ಆಸ್ಪದ ಕೊಡದೆ ಹೋದದ್ದು ಇಂಥ ದೊಡ್ಡ ದುರಂತಕ್ಕೆ ನಾಂದಿಯಾಯಿತೆಂದುಕೊಂಡರೆ ಅತಿಶಯವೆನಿಸಲಾರದು. ಒಂದೆರಡು ಗಂಟೆಗಳ ವಿಶ್ರಾಂತಿ ಕೋರಿದವಳು ರಾತ್ರಿ ಹತ್ತು ಗಂಟೆಯಾದರೂ ಎಚ್ಚರಗೊಂಡಿರುವ ಸುಳಿವಾಗಲೀ, ಹೊರಗೆ ಬಂದದ್ದಾಗಲೀ ಯಾರ ಗಮನಕ್ಕೂ ಬರದೆ ಹೋದಾಗ, ಒಂದು ಬಗೆಯ ಅನುಮಾನ, ಶಂಕೆ, ಯಾವುದೋ ಅನಿಷ್ಟದ ಕಲ್ಪನೆ.... ಇಂತಹ ಭಾವ ಸ್ಥಿತಿಗಳಲ್ಲದ್ದಾಗ ಪಕ್ಕದ ಕೋಣೆಯಲ್ಲಿಯೇ ಇದ್ದ ಸಕ್ಕೂಬಾಯಿ ಕಲ್ಪನಾಳ ಕೋಣೆಯಿಂದ ಯಾವ ಸದ್ದೂ ಬಾರದಿರುವುದನ್ನು ಮತ್ತು ಬಾಗಿಲು ತಟ್ಟಿದರೆ ಒಳಗಿನಿಂದ ಚಿಲಕ ಹಾಕಿಕೊಂಡಿರುವುದು ಮನದಟ್ಟಾದಾಗ ಭಯ, ಆತಂಕಗಳಿಂದ ಅಕ್ಕಪಕ್ಕದ ಜನರನ್ನು ಮತ್ತು ನಾಟಕ ಸಂಘದ ಇತರೆ ಸದಸ್ಯರನ್ನು ಕರೆದು ಕೋಣೆಯ ಬಾಗಿಲನ್ನು ಒಡೆದು ಒಳ ನುಗ್ಗಿದಾಗ ಕಣ್ಣಿಗೆ ಬಿದ್ದ ದೃಶ್ಯ

ಒಮ್ಮೆಲೇ ದಿಗ್ಭ್ರಾಂತಗೊಳಿಸುವಂತೆ ಇತ್ತಂತೆ. ಪ್ರಶಾಂತ ಸ್ಥಿತಿಯಲ್ಲಿ ಮಲಗಿದ್ದ ಕಲ್ಪನಾ ನಿದ್ದೆ ಮಾಡುತ್ತಿಲ್ಲ; ಚಿರನಿದ್ರೆಗೆ ಸಂದಿದ್ದಾಳೆ. ಅವಳ ಪಕ್ಕದಲ್ಲಿ ಹಾಸಿಗೆ ಮೇಲೆ "ಮಂಕು ತಿಮ್ಮನ ಕಗ್ಗ" ಪುಸ್ತಕ ಬಿದ್ದಿತ್ತಂತೆ. ಜೊತೆಗೆ ಅವಳ ಕೈಬೆರಳಿನ ಉಂಗುರದಲ್ಲಿದ್ದ ಹರಳು ಕಾಣೆಯಾಗಿತ್ತಂತೆ!! ಇದೊಂದು ಸಂದೇಹಾಸ್ಪದ ಸಾವು ಪೋಲೀಸರಿಗೆ ಸುದ್ದಿ ನೀಡಲೇ ಬೇಕಾದ ಅಗತ್ಯವಿದೆಯೆಂದು ಪೋಲೀಸರಿಗೆ ಸುದ್ದಿ ಮುಟ್ಟಿದ ಕೂಡಲೇ, ಆಗಮಿಸಿದ ಪೋಲೀಸರು ಸಾವಿಗೆ ಕಾರಣವನ್ನು ಇಂಥದ್ದೇ ಎಂದು ಖಚಿತವಾಗಿ ಹೇಳದಿದ್ದರೂ ಆತ್ಮಹತ್ಯೆ ಎಂದು ನಿರ್ಧರಿಸಿಬಿಟ್ಟರು. ಕೆಲವು ವದಂತಿಗಳ ಪ್ರಕಾರ ನಿದ್ದೆ ಗುಳಿಗೆಗಳಿಂದ ಸಾವನ್ನು ಅಪ್ಪಿದ್ದಾಳೆ ಎಂದಾದರೆ ಮತ್ತೆ ಕೆಲವರ ಪ್ರಕಾರ ವಜ್ರದ ಹರಳನ್ನು ಪುಡಿಗುಟ್ಟಿ ಸೇವಿಸಿ ಸಾವನ್ನು ಅಪ್ಪಿಕೊಂಡಿದ್ದಾಳೆ. ಆದರೆ ಕಾರಣ ಯಾವುದಾರೇನು



ಅಷ್ಟೊಂದು ಪ್ರತಿಭಾವಂತೆಯಾದ ಗೆಳತಿಯ ಸಾವು ನನ್ನನ್ನು ತೀರಾ ಅಧೀರಳನ್ನಾಗಿಸಿ ಬಿಟ್ಟಿತ್ತು. ಎಲ್ಲಿಯೋ ನಾನು ಕೂಡಾ ಅಪರಾಧಿ ಎನಿಸುತ್ತಿತ್ತು. ಅಷ್ಟು ಹತ್ತಿರವಾಗಿದ್ದೆ. ಅವಳನ್ನು ಸಾವಿಗೆ ದೂಡುವಷ್ಟು ಪ್ರಬಲ ಕಾರಣ ಏನಿರಬಹುದೆಂದು ಊಹಿಸಲಾರದೆ ಹೋದೆ. ಅವಳೂ ಕೂಡ ಒಂದು ಚೂರೂ ಇಂಥ ಭಯಂಕರ ದುರಂತದತ್ತ ಹೆಜ್ಜೆ ಹಾಕುತ್ತಿರುವುದರ ಸೂಚನೆಯನ್ನೂ ಕೊಟ್ಟಿರಲಿಲ್ಲ. ಇಷ್ಟೆಲ್ಲ ವಿಷಯಗಳು ತಿಳಿದು ಬಂದ ಮೇಲೆ ನಾನು ಏನುಮಾಡಬೇಕೆಂದು ಯೋಚಿಸುತ್ತಿದ್ದೆ. ಬೆಳಗಾವಿ ಜನಕ್ಕೆ ಮೊದಲು ಕಲ್ಪನಾ ಸಾವಿನ ಸುದ್ದಿಯ ಆಘಾತದ ಅನುಭವವಾದದ್ದು. ಮರು ದಿವಸ ಸುದ್ದಿ ಎಲ್ಲೆಲ್ಲೂ ವ್ಯಾಪಿಸಿತು. ದಿನಪತ್ರಿಕೆಗಳ ತುಂಬೆಲ್ಲಾ ಸಾವಿನ ಸುದ್ದಿಯ ಸೂತಕವೇ! ಚಿತ್ರ ಜಗತ್ತಿನ ಘಟಾನುಘಟಿಗಳ ಪ್ರತಿಕ್ರಿಯೆಗಳು ಭಾನುವಾರ ಬೆಳಗ್ಗೆ ಅಂದರೆ 13ನೇ ಮೇಯಂದು ಅವಳ ದೇಹದ (ನಿರ್ಜೀವ) ಆಗಮನ.



ಅವಳನ್ನು ಆ ಸ್ಥಿತಿಯಲ್ಲಿ ನೋಡಲು ಊಹಿಸಿಕೊಳ್ಳುವುದೂ ನನಗೆ ಸಾಧ್ಯವಿರಲಿಲ್ಲ. ಆದರೂ ಅವಳ ಅಂತಿಮ ದರ್ಶನದ ಅವಕಾಶ ಈ ಒಂದು ಕ್ಷಣದ ದೌರ್ಬಲ್ಯದಿಂದ, ಕಳೆದುಕೊಂಡರೆ ಜೀವನ ಪರ್ಯಂತ ಪರಿತಪಿಸ ಬೇಕಾಗುತ್ತದೆಂದು ಭಾವಿಸಿ ಓಡಿದೆ. ಕನಕಪುರ ರಸ್ತೆಯ ಖಾಸಗಿ ತೋಟದಲ್ಲಿ ಅಚ್ಚ ಹಸಿರಿನ ನಡುವೆ ಹೊಚ್ಚ ಹೊಸ ಬಾಳಿನ ಮಧುರಾನುಭೂತಿಗಳನ್ನು ಅನುಭವಿಸಬೇಕಾಗಿದ್ದ ಚೇತನ, ನಿಶ್ಚೇತನ ಸ್ಥಿತಿಯಲ್ಲಿ ಯಾವುದರ ಪರಿವೆಯೇ ಇಲ್ಲದಂತೆ, ನಿರ್ಭಾವುಕವಾಗಿ ಯೋಗ ಸಮಾಧಿಯಲ್ಲಿರುವಳೇನೋ ಎಂಬಂತೆ ಗಂಧದ ಚಕ್ಕೆಗಳಿಂದ ನಿರ್ಮಿಸಿದ್ದ ಚಿತೆಯ ಮೇಲೆ, ಅವಳ ಅತ್ಯಂತ ಪ್ರೀತಿಯ ಬಣ್ಣದ ಕೆಂಪು ಜರತಾರಿ ಸೀರೆ ಹೊದ್ದು ಮಲಗಿದ್ದ ದೃಶ್ಯ ನನ್ನ ಕರುಳು ಹಿಂಡುತ್ತಿತ್ತು. ಅವಳ ಅಭಿಮಾನಿಗಳು ಸಾಗರೋಪಾದಿಯಲ್ಲಿ ಬಂದು ನೆರೆದಿದ್ದರು. ಹತ್ತಿಕ್ಕಲಾಗದ ಆಶ್ರುತರ್ಪಣ ನೀಡುತ್ತಿದ್ದವರೆಷ್ಟೋ! ಅವಳಿಗೆ ಚಿತ್ರ ಜಗತ್ತಿನಲ್ಲಿ ನೆಲೆಯೂರಿ ನಿಲ್ಲುವಂತೆ, ಅದ್ಭುತ ಅಭಿನಯ ಸಾಮರ್ಥ್ಯ ಅನಾವರಣಗೊಂಡು ಕನ್ನಡಿಗರೆದೆಯಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂತೆ ರೂಪಿಸಿದ ಕಲಾಶಿಲ್ಪಿ, ಅಪ್ರತಿಮ ಪ್ರತಿಭಾವಂತ ನಿರ್ದೇಶಕರಾದ ಪುಟ್ಟಣ್ಣ ಕಣಗಾಲರ ಅಳಲು ಮುಗಿಲು ಮುಟ್ಟಿತ್ತು. ಅವಳ ಪ್ರತಿಭೆ, ಕೌಶಲಗಳ ಗುಣಗಾನ ಮಾಡುತ್ತ, ಅವಳನ್ನು ಅರಿಶಿನ, ಕುಂಕುಮದೊಂದಿಗೆ ಅಲಂಕರಿಸುತ್ತಿದ್ದ ಅವರನ್ನು ನೋಡಿದಾಗ ಲೋಹಿತಾಶ್ವನ ಶವದ ಮುಂದೆ ಅವನ ಗುಣಗಾನ ಮಾಡುತ್ತಾ ಶೋಕ ವಿಹ್ವಲ್ಲೆಯಾಗುತ್ತಿದ್ದ ಹರಿಶ್ಚಂದ್ರನ ಮಡದಿ ಚಂದ್ರಮತಿಯ ನೆನಪಾಗುತ್ತಿತ್ತು. ಅಗ್ನಿ ಸ್ಪರ್ಶವಾಗುತ್ತಿದ್ದಂತೆ ಪ್ರಜ್ವಲಿಸಿದ ಅಗ್ನಿ ಜ್ವಾಲೆಗಳು ಹಸಿದು ಕಂಗಾಲಾಗಿದ್ದು ಕಬಳಿಸುವಂತೆ ಅವಳ ದೇಹವನ್ನು ಕಬಳಿಸುತ್ತಿದ್ದವು. ಯಾರಿಗೂ ಆ

ಅಗ್ನಿದಾಹವನ್ನು ತಡೆಯುವ ಅಗತ್ಯವಿರಲಿಲ್ಲ. ಯಾಕೆಂದರೆ ಅವಳನ್ನು ಮರಳಿ ಉಳಿಸಿಕೊಳ್ಳಲು ಅವಳ ಆತ್ಮ ಅನಂತದೆಡೆಗೆ ಪಯಣಿಸಿಬಿಟ್ಟಿತ್ತು. "ಓ ನನ್ನ ಚೇತನ ಆಗು ನೀ ಅನಿಕೇತನ"-ಎಂದ ಕುವೆಂಪುರವರಂತೆ ಇವಳೂ ಪ್ರಾರ್ಥಿಸಿದ್ದಿರಬೇಕು.

ಭಾರವಾದ ಹೃದಯ, ಭಾರವಾದ ಹೆಜ್ಜೆ. ದಾರಿ ಸಾಗುವುದೆ ಪ್ರಯಾಸವೆನಿಸಿತ್ತು. ಅವಳ ಸಾವೇ ನನ್ನೆಲ್ಲಾ ಕ್ಷಣಗಳನ್ನು ಆವರಿಸಿಕೊಂಡು ಬಿಟ್ಟಿತ್ತು. ಅವಳು ಯಾಕೆ ಸತ್ತಳು? ಸಾಯುವಂತಹ ಕಷ್ಟ ಅವಳಿಗೇನಿತ್ತು? ಪ್ರೀತಿಸುವ ತಾಯಿ, ಚಿಕ್ಕಮ್ಮ, ಬಂಧು, ಬಳಗ, ಸ್ನೇಹಿತರು, ಎಲ್ಲಕ್ಕಿಂತ ಹೆಚ್ಚಾಗಿ ಅವಳ ಅಭಿಮಾನಿ ಬಳಗ-ಹೀಗಿದ್ದರೂ ಸತ್ತದ್ದೇಕೆ? ಅವಳು ಸಾಯುವುದು ಅಸಂಭವ. ಆದ್ದರಿಂದ ಸಾಯಿಸಲ್ಪಟ್ಟಳೇ?-ಎಂಬ ಒಂದು ಅನುಮಾನದ ಸಣ್ಣ ಕೀಟ ನನ್ನನ್ನು ಕೊರೆಯಲು ಪ್ರಾರಂಭಿಸಿತು. ಆದರೆ ನನ್ನ ಅನುಮಾನಕ್ಕೆ ದನಿಕೊಟ್ಟು ಬೆಂಬಲಿಸುವವರಾದರೂ ಯಾರು? ಜೊತೆಗೆ ಕೊಲ್ಲುವುದಕ್ಕೆ ಪ್ರಬಲ ಕಾರಣವೂ ಇದ್ದಿರಲಾರದು. ಹಾಗೆಂದೂ ನಿರ್ಧಾರವಾಗಿ ಏನನ್ನೂ ಹೇಳಲಾಗುವುದಿಲ್ಲ. ಯಾರ ಯಾರ ಮನಸ್ಸುಗಳು ಯಾರನ್ನು ಕುರಿತು ಹೇಗೆ ಆಲೋಚಿಸುವುದೋ ಯಾರಿಗೆ ಗೊತ್ತು?

ನನ್ನ ಗೆಳತಿಯ ಸಾವಿನ ಸೂತಕದ ಛಾಯೆಯಲ್ಲಿಯೇ ಕೆಲದಿನಗಳು ಕಳೆದು ಹೋದವು.... ಒಮ್ಮೊಮ್ಮೆ ನನಗೆ ಅವಳ ಬಗ್ಗೆ ಏನಾದರೂ ಬರೆಯಬೇಕು. ಅವಳನ್ನು ಬರಹದಲ್ಲಿ ಚಿರಸ್ಥಾಯಿಗೊಳಿಸಬೇಕು ಎನಿಸಿತ್ತಿತ್ತು. ಆದರೆ ಬರೆಯುವುದಾದರೂ ಏನನ್ನು?..... ಕುಟುಂಬದವರ ಬಗ್ಗೆ ತನ್ನ ಸಂಬಂಧಗಳ ಬಗ್ಗೆ ಯಾರ ಬಳಿಯೂ ಹೆಚ್ಚಾಗಿ ಏನನ್ನೂ ಹೇಳುತ್ತಿರಲಿಲ್ಲ. ಆದರೆ ಅವಳ ಮೂಡುಗಳು ಮಾತ್ರ ಅವಳನ್ನು ಹತ್ತಿರದಿಂದ ಬಲ್ಲವರಿಗೆ ಅವಳ ಸಮಸ್ಯೆಗಳ ಸೂಕ್ಷ್ಮಗಳನ್ನು ತಿಳಿಸಿಬಿಡುತ್ತಿದ್ದವು. ಅವಳೇ ಅವಳದೊಂದು ಆತ್ಮಚರಿತ್ರೆ ಬರೆದಿದ್ದರೆ ಹೇಗಿರುತ್ತಿತ್ತು! ಎಂದು ಕೊಳ್ಳುತ್ತಿರುವಾಗ, ನನಗೆ ಥಟ್ಟನೆ ಅವಳು ನನಗೆ ಉಡುಗೊರೆಯಾಗಿ ಕೊಟ್ಟದ್ದ ಪ್ಯಾಕೆಟ್‌ನ ನೆನಪಾಯಿತು. ಇಷ್ಟು ದಿವಸ ಅದರ ಕಡೆ ಗಮನ ಹರಿದಿರಲಿಲ್ಲ. ಅದರ ಪ್ರಾಮುಖ್ಯತೆಯೂ ಭಾಸವಾಗಿರಲಿಲ್ಲ. ವ್ಯಕ್ತಿಗಳು ಹತ್ತಿರವಿದ್ದಾಗ, ಅವರಾಗಲೀ ಅವರು ನೀಡಿದ ವಸ್ತುಗಳಾಗಲೀ ನಮಗೆ ಮುಖ್ಯವೆನಿಸದು. ಆದರೆ ಅವರು ದೂರವಾಗಿ ನೆನಪಾಗಿ ಮಾತ್ರ ಉಳಿದಾಗ ಅವರ ಪ್ರತಿಯೊಂದು ಮಾತು, ಕೃತಿ, ಅವರ ವಸ್ತು, ಅವರ ಸಂಬಂಧಗಳು ನಮಗೆ ಹೊಸ ಅರ್ಥಗಳನ್ನು ಹೊಳೆಸುತ್ತವೆ;

ಅವೆಲ್ಲವೂ ಮುಖ್ಯವೆನಿಸುತ್ತವೆ. ಹಾಗಾಗಿ ನಾನು ಥಟ್ಟನೆ ಅಲಮಾರಿನಲ್ಲಿ ಸೀರೆಗಳ ಅಡಿಯಲ್ಲಿ ಇರಿಸಿದ್ದ ಪ್ಯಾಕೆಟನ್ನು ಈಚೆಗೆ ತೆಗೆದು ಆತುರ ಆತುರವಾಗಿ ಮೇಲಿನ ಪೇಪರನ್ನು ಕಿತ್ತೆಸೆದು ನೋಡಿದರೆ, ಅದೊಂದು ಡೈರಿ! ತುಂಬಾ ಸುಂದರವಾಗಿ, ಕಲಾತ್ಮಕವಾಗಿತ್ತು. ತೆಗೆಯುತಿದ್ದಂತೆ ಮೊದಲ ಪುಟದಲ್ಲಿಯೇ 'ದಾಮಿನಿ, ಇದು ನಿನಗೆ ನನ್ನ ವಿದಾಯ ಸಂದರ್ಭದ ಉಡುಗೊರೆ" ಇದರಲ್ಲಿ ನನ್ನ ಆತ್ಮದ ತುಣುಕುಗಳಿವೆ. ನನ್ನ ಅನುಭವಗಳ ಅಕ್ಷರ ರೂಪಗಳಿವೆ. ಹೊರಗೆ ಹೇಳಿಕೊಳ್ಳಲಾಗದ್ದನ್ನು ,ಇಲ್ಲಿ ಉಸಿರಿದ್ದೇನೆ.... ನಿಧಾನವಾಗಿ ಓದು ಇದು ದಿನಚರಿಯೋ ಮನಚರಿಯೋ ಗೊತ್ತಿಲ್ಲ. ನೀನು ಬರಹಗಾರ್ತಿ ಬೇಕಾದಂತೆ ಬಳಸಿಕೋ. ಇದನ್ನು ಓದಿ ಅನುಮಾನಗಳು ಬಂದರೆ ಅವುಗಳನ್ನು ಪರಿಹರಿಸಲು ನಾನು ಇರುವುದಿಲ್ಲ. ಬಹಳ ಬ್ಯೂಸಿ ಷೆಡ್ಯೂಲ್‌ಗಳು! ಅಲ್ಲದೇ ಸ್ವಲ್ಪ ಕಾಲ ನಾನು ಪ್ರಶಾಂತ ಮೌನದಲ್ಲಿ ಉಳಿಯಬೇಕೆಂದುಕೊಂಡಿದ್ದೆನೆ. ದಯವಿಟ್ಟು ಸಂಪರ್ಕಿಸುವ ಪ್ರಯತ್ನ ಬೇಡ. ನಾನೇ ನಾನಾಗಿ ಪ್ರಕಟಗೊಳ್ಳುತ್ತೇನೆ. ನನ್ನ ಅಭಿಮಾನಿಗಳನ್ನು ನನ್ನ ಬಳಿಗೆ ಸೆಳೆದುಕೊಳ್ಳುತ್ತೇನೆ"-ಎಂದು ಒಂದು ಪುಟ್ಟಬರಹವಿತ್ತು. ನಂತರದ ಪುಟಗಳಲ್ಲಿ ದಿನಾಂಕಗಳು ನಮೂದಾಗಿರಲಿಲ್ಲವಾದರೂ ಏನೇನೋ ಗೀಚಿದ್ದಳು. ಕೆಲವೆಡೆಗಳಲ್ಲಿ ಸಿಟ್ಟಿನ ರಭಸವಿತ್ತು; ಮತ್ತೆ ಕೆಲವೆಡೆ ಸೊಕ್ಕಿನ ಸ್ವಗತಗಳಿದ್ದವು; ಇನ್ನೊಂದೆಡೆ ಹತಾಶೆ, ನಿರಾಶೆಗಳ ನಿಟ್ಟುಸಿರಿತ್ತು. ಹಲವಾರು ವ್ಯಕ್ತಿಗಳು ಘಟನೆಗಳು ದಾಖಲಾಗಿದ್ದವು. ಆದರೆ ಅವಳು ಬರೆದದ್ದು ಒಂದಕ್ಕೊಂದು ಸಂಬಂಧವಿಲ್ಲದೇ ಅಸಂಬದ್ಧವಾಗಿದ್ದವು. ಆದರೂ ಒಂದನ್ನೊಂದು ತೀರಾ ಆಸಕ್ತಿಯಿಂದ ಓದಿದೆ. ಅವಳನ್ನು ಅವಳ ಅಂತರಂಗವನ್ನು ಬಲ್ಲವಳಾದ್ದರಿಂದ ನನಗೆ ಅವಳ ಮಾತುಗಳ ಅಂತರಾರ್ಥ ತಿಳಿಯುತ್ತಿತ್ತು. ನನಗೆ ಗೊತ್ತು. ಅವಳು ಎಷ್ಟು ಒರಟಾಗಿ, ಉದ್ದಟಳಾಗಿ ಹೊರಗೆ ಕಾಣಿಸಿದರೂ ಒಳಗೆ ಮೆದು. ಆದರೆ ಆ ಮೆದುತನ ಬಹಿರಂಗವಾಗಿ ತೋರಿಸಿಕೊಳ್ಳಲು ಅವಳು ಪ್ರಯತ್ನಿಸಲಿಲ್ಲ. ತನ್ನ ಗತ್ತು, ಗೈರತ್ತು. ಪ್ರತಿಷ್ಠೆ, ಸ್ವಾಭಿಮಾನಗಳು ಕರಗಿ ಹೋಗುವುದೆಂಬ ಭೀತಿಯಿಂದ,- ಬಳಗವನ್ನು ಎಂದಿಗೂ ಕಾಣಿಸುತ್ತಿರಲಿಲ್ಲ. ಅವಳಲ್ಲಿ ಒಂದು ದೊಡ್ಡ ದೌರ್ಬಲ್ಯವಿತ್ತು. ಹಟ, ಛಲ, ಬಯಸಿದ್ದು ಆಗಲೇ ಬೇಕು; ಪಡೆಯಲೇಬೇಕು- ಎಂಬುದು. ಅದಕ್ಕೆ ಯಾವ ಮಟ್ಟಕ್ಕಾದರೂ ಹೋಗಿಬಿಡುತ್ತಿದ್ದಳು. ಬೇರೆಯವರನ್ನೂ ನೋಯಿಸುತ್ತಿದ್ದಳು; ಅದಕ್ಕಿಂತ ಭಯಂಕರವಾದ ರೀತಿಯಲ್ಲಿ ತನ್ನನ್ನೂ ನೋವಿಗೆ ದೂಡಿಕೊಳ್ಳುತ್ತಿದ್ದಳು. ಬಹುಶಃ ಇದೆ ಪ್ರವೃತ್ತಿ, ಮಾನಸಿಕ ಆಘಾತದಿಂದ ಅವಳನ್ನು ಆತ್ಮಾಘಾತಕ್ಕೂ ಪ್ರಚೋದಿಸಿರಬೇಕು. ಎಂದು ನನ್ನ

ಮನಸ್ಸು ತಲ್ಲಣಿಸುತ್ತಿತ್ತು. ಅದೆಲ್ಲವನ್ನೂ ಜನಕ್ಕೆ ತಿಳಿಯ ಪಡಿಸುವುದು ಹೇಗೆ? ಒಂದು ವೇಳೆ ತಿಳಿಯ ಪಡಿಸಿದರೂ ಅದರಿಂದ ಪ್ರಯೋಜನವೇನು. ಜನ ಬಹಳ ಬೇಗ ಎಲ್ಲವನ್ನೂ ಮರೆತುಬಿಡುತ್ತಾರೆ. ಖ್ಯಾತಿಯ ಉತ್ತುಂಗದಲ್ಲಿ ಇರುವಾಗ ಎಲ್ಲರೂ ವಂದಿ ಮಾಗದರೇ!! ಮೇಲಿಂದ ಮೇಲೆ ಹೊಗಳಿ ಬರೆಯುವುದು; ಅವರ ವಿಭಿನ್ನ ಭಂಗಿಗಳಲ್ಲಿನ ಭಾವಚಿತ್ರಗಳನ್ನು ಪ್ರದರ್ಶಿಸುವುದು ಸನ್ಮಾನ ಸಮಾರಂಭಗಳನ್ನು ಏರ್ಪಡಿಸಿ ಹಾರ ತುರಾಯಿಗಳಿಂದ ಶಾಲು, ಪೇಟಗಳಿಂದ ಗೌರವಿಸುವುದು ಎಲ್ಲವೂ ನಡೆಯುತ್ತದೆ. ಬಿರುದು ಬಾವಲಿಗಳ ಮಹಾಪೂರವೇ ಹರಿದುಬರುತ್ತದೆ. ಇದು ಯಾವೊಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಲ್ಲ. ಮತ್ತು ಯಾರೋ ಒಬ್ಬರು ಕಲಾವಿದರ ವಿಷಯದಲ್ಲಿ ಘಟಿಸುವಂಥದ್ದಲ್ಲ. ಅವರು ಬದುಕಿರುವಾಗಲೇ ಸ್ವಲ್ಪ ವರ್ಚಸ್ಸು, ಬೇಡಿಕೆ ಕಡಿಮೆಯಾದರೆ, ಅವಕಾಶಗಳು ತಪ್ಪಿದರೆ ಜನ ತಣ್ಣಗೆ ಮರೆತುಬಿಡುತ್ತಾರೆ. ಮುಂದೆ ಹಾದು ಹೋದರೂ ಗುರುತಿಲ್ಲದವರಂತೆ ಬೀಗಿ ನಡೆಯುತ್ತಾರೆ. ಕಲ್ಪನಾಳ ಸಂಬಂಧವಾಗಿಯೂ ಇಂಥದ್ದೆಲ್ಲ ನಡೆದದ್ದೆ! ಮಿನುಗುತಾರೆ, ಅಪ್ರತಿಮ ಕಲಾವಿದೆ. ಅವಳಿಗೆ ಅವಳೇ ಸಾಟಿ! ಅಭಿನಯ ಚತುರೆ, ಅತ್ಯಂತ ಸಹಜ ಅಭಿನೇತ್ರಿ!!–ಇಷ್ಟೆಲ್ಲ ಗರಿಗಳನ್ನು ಮುಡಿದುಕೊಂಡವಳೇಕೆ ಸಾಯಲು ಮುಂದಾದಳು?–ಇದು ಕೇವಲ ನನ್ನ ಪ್ರಶ್ನೆ ಅಲ್ಲ. ಅವಳ ವಿಚಾರದಲ್ಲಿ ಎಲ್ಲರೂ ಕೇಳಿಕೊಳ್ಳುವ ಪ್ರಶ್ನೆ.



ಎಷ್ಟೊಂದು ಕನಸುಗಳನ್ನು ಕಟ್ಟಿಕೊಂಡಿದ್ದಳು? ಚಿತ್ರರಂಗದಲ್ಲಿ ಒಂದು ಕ್ರಾಂತಿಯನ್ನೇ ಮಾಡಬೇಕೆಂದು ಮುಂದಾಗಿದ್ದಳು. ಎಲ್ಲದರ ಬಗ್ಗೆ ಆಸಕ್ತಿ. ಅವಳ ಅಭಿರುಚಿಯನ್ನಂತೂ ಕೊಂಡಾಡದಿರಲು ಸಾಧ್ಯವೇ. ನೋಟ, ಮಾಟ, ಕೂಟ–ಯಾವುದಾದರೂ ಸರಿ! ಸುಂದರವಾಗಿರಬೇಕು. ಕಲಾತ್ಮಕವಾಗಿರಬೇಕು. ಕಲಾತ್ಮಕತೆಯಲ್ಲಿಯೂ ತನ್ನದೇ ಆದ ಅನನ್ಯತೆಯಿರಬೇಕು. ಯಾರ ಪ್ರಭಾವಗಳೂ, ಪ್ರೇರಣೆಗಳೂ ತನ್ನ ಮೇಲಿರಬಾರದು– ಎನ್ನುವುದು ಅವಳ ದೃಢವಾದ ಅಭಿಪ್ರಾಯವಾಗಿತ್ತು. ಅದನ್ನು ಒಂದು ಕಡೆ



ತನ್ನ ಡೈರಿಯಲ್ಲಿ ಹೀಗೆ ಬರೆದಿದ್ದಾಳೆ; "ಭಗವಂತ ನಿಸರ್ಗವನ್ನು ಎಷ್ಟು ಸುಂದರವಾಗಿ ಸೃಷ್ಟಿಸಿದ್ದಾನೆ. ನಾವು ಮನುಷ್ಯರೂ ಕೂಡ ನಿಸರ್ಗದ ಭಾಗವೇ ಆದರೂ ಎಲ್ಲರನ್ನೂ ಸುಂದರವಾಗಿಯೇ ಸೃಷ್ಟಿಸಿಲ್ಲ; ಸುಂದರವಾದ ಬಾಳನ್ನೇ ಕೊಟ್ಟಿಲ್ಲ. ನಾನೇ ಇದಕ್ಕೆ ಸಾಕ್ಷಿ. ಆದರೇನು ನಮ್ಮನ್ನು ನಮ್ಮ ಪರಿಸರವನ್ನು, ನಮ್ಮ ಬದುಕನ್ನು ಸುಂದರವಾಗಿಸಿಕೊಳ್ಳುವುದು ನಮ್ಮ ಕೈಲೇ ಇದೆ. ನನ್ನ ಅಲಂಕಾರದಿಂದ ನನ್ನನ್ನು ಸುಂದರವಾಗಿಸಿಕೊಳ್ಳಲು ಪ್ರಯತ್ನಿಸುತ್ತೇನೆ. ನನ್ನದೇ ಆದ ರೀತಿಯಲ್ಲಿ ವಸ್ತ್ರಾಲಂಕಾರ, ಕೇಶಾಲಂಕಾರವನ್ನು ರೂಪಿಸುತ್ತೇನೆ. ಅದು ಅನನ್ಯವಾಗಿರಬೇಕು. ಅದಕ್ಕೆ ನನ್ನದೇ ಛಾಪು ಇರಬೇಕು. ಇದು ಕಲ್ಪನಾ ಸ್ಟೈಲ್ ಎಂದು ಪ್ರಚಲಿತವಾಗಬೇಕು" ಎಂದು ಅವಳು ಬರೆದುಕೊಂಡಿದ್ದಂತೆ ನಡೆದುಕೊಂಡಳು. ತಲೆಗಿಂತ ದೊಡ್ಡದಾದ ಕೇಶಾಲಂಕಾರ, ಮೊರದಗಲದ ಕಿವಿಯಾಭರಣ, ಹೊಕ್ಕುಳ ಕೆಳಗಿನಿಂದ ಉಟ್ಟ ಸೀರೆಯ ನೆರಿಗೆಗಳು ನೆಲವನ್ನು ಗುಡಿಸುತ್ತಲೇ ಅವಳ ಜೊತೆ ಸಾಗುತ್ತಿದ್ದವು. ಈ ವಿನ್ಯಾಸಕ್ಕೆ ಅವಳದೇ ಬ್ರಾಂಡ್. ತನ್ನ ಹಾಗೆಯೇ ತನ್ನ ಮನೆಯೂ ಒಂದು ಕಲಾತ್ಮಕ ಸೌಧವಾಗಿರಬೇಕೆಂದು ಅವಳ ಆಪೇಕ್ಷೆಯಾಗಿತ್ತು. ಕಲ್ಪನಾ ತನ್ನ ಕಲ್ಪನೆಯ ಮನೆಯನ್ನು ಕಟ್ಟಿಕೊಂಡು, ಅದನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಬಾಡಿಗೆ ಮನೆಯಾದರೂ ತಾನಿರುವವರೆಗೆ ಅದು ತನ್ನದೇ ಮನೆ ತನ್ನ ಅಭಿರುಚಿಗೆ ತಕ್ಕಂತೆ ಅಲಂಕರಿಸಿ ಇಡುತ್ತಿದ್ದಳು. ಅಂಥಾದ್ದರಲ್ಲಿ ತನ್ನ ಕನಸಿನ ಮನೆಯನ್ನು ಇನ್ನೆಷ್ಟು ಆಸಕ್ತಿಯಿಂದ ಅಲಂಕರಿಸಿ ಇಟ್ಟಿರಬೇಡ? 'ಅನುಗ್ರಹ' ಗೃಹದ ಸಿಂಗಾರಕ್ಕೆ, ಅದರ ಅಂದ ಚೆಂದಕ್ಕೆ ಏನೆಲ್ಲ ಪಾಡು ಪಟ್ಟಿದ್ದಳೋ ನನಗೆ ಗೊತ್ತು. ಎಷ್ಟು ಬಗೆಯಲ್ಲಿ ಅದನ್ನು ಅಲಂಕರಿಸಿದರೂ ತೃಪ್ತಿಯಿಲ್ಲ. ತನ್ನೆಲ್ಲ ಗಳಿಕೆಯನ್ನು ಅದರ ಶೃಂಗಾರಕ್ಕೇ ಸುರಿದುಬಿಟ್ಟಿದ್ದಳು. ಎಲ್ಲೆಲ್ಲಿ ಯಾವ ಯಾವ ಅಲಂಕರಣ ವಸ್ತುಗಳು ಸಿಗುತ್ತವೆಯೋ ಅವೆಲ್ಲವನ್ನೂ ತರಿಸಿ ಅಚ್ಚುಕಟ್ಟಾಗಿ, ಅಪರೂಪದ ಶೈಲಿಯಲ್ಲಿ ಸಿಂಗರಿಸಿದ್ದಳು. ಮನೆಯಲ್ಲಿ ಯಾವೊಂದು ವಸ್ತುವೂ ಸ್ಥಾನಭ್ರಂಶವಾಗಬಾರದು. ಇರಿಸಿದ ವಸ್ತು ಇದ್ದಲ್ಲಿಯೇ ಇರಬೇಕು. ಸ್ವಲ್ಪ ವ್ಯತ್ಯಾಸವಾದಾರೂ ಬೇಸರ, ಸಂಕಟಗಳು ಥಟ್ಟನೆ ಅವಳ ಮುಖದಲ್ಲಿ ಕಾಣಿಸಿಕೊಳ್ಳುತ್ತಿದ್ದವು. ಇಂತಹ ಶಿಸ್ತನ್ನು ನೋಡಿ ಅವಳ ಬಗ್ಗೆ ಹೆಮ್ಮೆ ಎನಿಸಿದರೂ, ಇದಕ್ಕಾಗಿ ಎಷ್ಟು ಸಮಯ ಹಾಳುಮಾಡುತ್ತಿದ್ದಾಳೆ ಎಂದುಕೊಂಡದ್ದೂ ಉಂಟು. ಆದರೆ ಅವಳ

ಈ ಸ್ವಭಾವಕ್ಕೆ ಅವಳ ಆಸಕ್ತಿಗೆ ಯಾರೂ ವಿರೋಧ ಹೇಳಿದವರಿಲ್ಲ. ಅವರೆಲ್ಲರಿಗೂ ಗೊತ್ತು. ಆ ಮನೆ, ಮನೆಯ ವಸ್ತುಗಳ ಜೊತೆಗೆ ಅವಳ ಉಸಿರೇ ತಳುಕು ಹಾಕಿಕೊಂಡಿತ್ತು' ಎಂದು, ಎಲ್ಲರನ್ನೂ ಪ್ರೀತಿಯಿಂದ ತಬ್ಬಿಕೊಳ್ಳುವ ಮನಸ್ಸು. ತನಗೆ ಯಾರಾದರೂ ಇಷ್ಟವಾಗಿ ಬಿಟ್ಟರೆ ತನ್ನ ಪ್ರಾಣದ ಹಾಗಿರುವ ವಸ್ತುವನ್ನೂ ಕೂಡಾ ಕೊಟ್ಟು ಬಿಡುತ್ತಿದ್ದಳು. ಹಾಗೆಯೇ ಯಾರಾದರೂ ಪ್ರೀತಿಯಿಂದ ಯಾವುದಾದರೂ ವಸ್ತುವನ್ನು ಕೊಟ್ಟಾಗ ಪ್ರಾಣಕ್ಕಿಂತ ಜೋಪಾನವಾಗಿ ಕಾಯ್ದಿರಿಸುತ್ತಿದ್ದಳು. ಒಂದು ಕಡೆ ಇದಕ್ಕೆ ಸಂಬಂಧಿಸಿದಂತೆ ಬರೆದಿದ್ದಳು. " ನನಗೆ ಪುಟ್ಟಣ್ಣ ಕಣಗಾಲ್ ಎಂದರೆ ದೇವರ ಸಮಾನ. ಅವರು ನನ್ನ ಗುರು ಇದ್ದ ಹಾಗೆ. ನನಗೆ ಮಾರ್ಗದರ್ಶಕರು ಇದ್ದ ಹಾಗೆ. ಆದರೆ ಅವರಿಗೆ ಉಡುಗೊರೆಯಾಗಿ ಬಂದ ಶಾರದೆಯ ವಿಗ್ರಹಕ್ಕೆ ಒದಗಿದ ಸ್ಥಿತಿ ನೋಡಿದಾಗ ಅವರ ಮೇಲೂ ಬೇಸರವಾಯಿತು. ನಾವು ನಮಗೆ ಪ್ರೀತಿಯಿಂದ ಬಂದ ವಸ್ತುಗಳನ್ನೂ ಭಾವಿಸದೆ ನಮ್ಮಂತೆ ಸಚೇತನವೆಂದು ಭಾವಿಸಿ ಪ್ರೀತಿಸದಿರುವುದು ಎಂತಹ ಅನ್ಯಾಯ!" ಯೋಚಿಸುತ್ತಾ ಹೋದಂತೆಲ್ಲ ಅವಳ ವ್ಯಕ್ತಿತ್ವವನ್ನೇಕೆ ಕಟ್ಟುಕೊಳ್ಳಬಾರದು! ನನ್ನ ಒಡನಾಟ, ಮರೆತು ಬದಿಗಿಟ್ಟಿದ್ದ ಅವಳ ಡೈರಿಯಲ್ಲಿನ ಅವಳ ಅನುಭವ ಕಥನ, ಬಿಚ್ಚಿಟ್ಟ ಭಾವಾಂತರಂಗ' – ಸ್ವಲ್ಪ ಮಟ್ಟಿಗಾದರು ಒಂದು ಸುಸಂಬದ್ಧ ಚಿತ್ರವನ್ನು ಕೊಡಲಾರದೇ ಎಂದುಕೊಂಡೆ. ಇಷ್ಟು ದಿವಸಗಳಿಂದ ನನ್ನ ವಿಸ್ಮೃತಿಯ ಕೋಶದಲ್ಲಿ ತಣ್ಣಗಿದ್ದ ಅವಳ ನೆನಪು ಈಗ ಈ ದಿನ ಇಷ್ಟೊಂದು ಕಾಡಲು ಶುರುವಾದದ್ದು. ಚಲನ ಚಿತ್ರರಂಗ ಅಮೃತ ಮಹೋತ್ಸವ ಆಚರಿಸಿಕೊಳ್ಳುತ್ತಿದೆ. ದೈತ್ಯ ಅಭಿನೇತ್ರಿಯಾಗಿ ಚಿತ್ರ ಪ್ರೇಮಿಗಳ ಜನ ಮನದಲ್ಲಿ ಅಚ್ಚಳಿಯದೆ ಮೂಡಿ ನಿಂತಿರಬಹುದಾದ ಅವಳನ್ನು ಮತ್ತೊಮ್ಮೆ ಸ್ಮರಿಸಿಕೊಳ್ಳುವುದು, ಅವಳ ಚಲನಚಿತ್ರ ರಂಗದಲ್ಲಿ ಸಾಗಿದ ಪಯಣದ ಹೆಜ್ಜೆಗಳನ್ನು ಗುರುತಿಸುವುದು ನಮ್ಮೆಲ್ಲರ, ಅಲ್ಲ.... ಅಲ್ಲ ಅವಳ ಗೆಳತಿಯಾದ ನನ್ನ ಹೊಣೆಗಾರಿಕೆ ಎನಿಸಿತು. ಮೂವತ್ತು ವರ್ಷದ ನನ್ನ ಮೌನಕ್ಕೆ ಮಾತು ಬರಿಸುವ ಪ್ರಯತ್ನವಾಗಬೇಕು ಎನಿಸಿದ್ದರಿಂದ ಅವಳ ಬಗ್ಗೆ ಹೇಳಿಬಿಡುತ್ತೇನೆ. ಇದರಲ್ಲಿ ನನ್ನ ಮಾತು, ಅವರಿವರ ಮಾತು ಮತ್ತು ಅವಳ ಮಾತೂ ಸೇರಿರಬಹುದು. ಅವಳು ನನಗಾ, ಉಳಿಸಿದ ಕೆಲವು ಸ್ಮೃತಿಗಳು ಇವುಗಳಾಗಿವೆ. ಅವಳ ಮಾತುಗಳಲ್ಲೇ ಅವಳ ಕತೆಯನ್ನು ಅರಳಿಸುತ್ತೇನೆ:–

"ನನ್ನ ಅಪ್ಪ ಅಮ್ಮ (ಕೃಷ್ಣಮೂರ್ತಿ, ಜಾನಕಮ್ಮ)ನಿಗೆ ಮುದ್ದಿನ ಮಗಳೇನೋ ಹೌದು. ಆದರೂ ನನಗೆ ನನ್ನ ಚಿಕ್ಕಮ್ಮನೊಡನೆ ನನಗಿದ್ದ ಸಲುಗೆ, ಅವರು

ನೀಡಿದ್ದ ಪ್ರೀತಿಯ ಸವಿಯಿಂದ ಅವರಿಂದ ದೂರವಾಗಲು ನನ್ನ ಮನಸ್ಸು ಒಪ್ಪುತ್ತಿಲ್ಲ. ಆದರೂ ಒತ್ತಾಯಕ್ಕೆ ಬಿದ್ದು ಮಂಗಳೂರಿನಿಂದ ಬೆಂಗಳೂರಿಗೆ ಬಂದರೂ ನನಗೆ ಮಂಗಳೂರಿನ ತುಡಿತವೇ ಹೆಚ್ಚಾಗಿದ್ದು, ಮತ್ತೆ ಅಲ್ಲಿಗೇ ಹೊರಟು ಹೋದೆ. ಆಗ್ನೆಸ್ ಕಾನ್ವೆಂಟಿಗೆ ಸೇರಿ ಓದು ಮುಂದುವರೆಸಿದನಾದರೂ ಯಾಕೋ ನನಗೆ ಓದು ಬೇಡವೆನಿಸುತ್ತಿದೆ. ಓದಿನಿಂದ ಸಾಧಿಸಬೇಕಾದ್ದೇನಿದೆ. ಒಂದು ವೇಳೆ ಓದಿದರೂ ಯಾವುದೋ ಉದ್ಯೋಗ ಹಿಡಿದು ಹೊಟ್ಟೆಪಾಡನ್ನು ತಣಿಸಬೇಕಷ್ಟೆ. ಅದಕ್ಕಿಂತ ಬೇರೆಯಾಗಿ ಎಲ್ಲರೂ ನನ್ನನ್ನು ಮೆಚ್ಚಿಕೊಳ್ಳುವಂತಹ ರೀತಿಯಲ್ಲಿ, ಏನನ್ನಾದರೂ ಮಾಡಬೇಕು ಎನಿಸುತ್ತಿದೆ.

ಶಾಲೆಯಲ್ಲಿ ನನ್ನನ್ನು ಪ್ರತಿಭಾವಂತೆ ಎಂದು ಗುರುತಿಸಿದ್ದರು. ಎಲ್ಲಾ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ನನ್ನದೇ ಬಹುದೊಡ್ಡ ಪಾತ್ರ. ಯಾವಾಗಲೂ ದೊರೆಯುತ್ತಿದ್ದ ಪ್ರೋತ್ಸಾಹದ ಚಪ್ಪಾಳೆ, ನನ್ನನ್ನು ಮತ್ತಷ್ಟು ನೃತ್ಯ. ನಾಟಕಗಳಿಗೆ ದೂಡುತ್ತಿತ್ತು. ನಾನು ಬಹುದೊಡ್ಡ ಕಲಾವಿದೆಯಾಗಬೇಕು. ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಬೇಕು. ಇದು ನನ್ನ ಕನಸು. ಈ ಕನಸು ನನಸಾಗಿಸುವುದೇ ನನ್ನ ಜೀವನದ ಗುರಿ" – ಹೀಗೆ ಬರೆದುಕೊಂಡಿದ್ದವಳು ಆಕಸ್ಮಿಕವೆಂಬಂತೆ ಚಲನಚಿತ್ರರಂಗ ಪ್ರವೇಶ ಮಾಡಿದ್ದು, ಬಹುದೊಡ್ಡ ತಾರೆಯಾಗಿ ಮಿಂಚಿದ್ದು. ಎಲ್ಲವೂ ವಿಧಿಯ ವಿಪರ್ಯಾಸ.

"ಈ ದಿನ ನನಗೊಂದು ಆಶ್ಚರ್ಯ ಕಾದಿತ್ತು. ಚಿಕ್ಕಮ್ಮ ಚಿಕ್ಕಪ್ಪ ನನ್ನನ್ನು 'ಕಿತ್ತೂರು ರಾಣಿ ಚೆನ್ನಮ್ಮ' ಚಿತ್ರಕ್ಕೆ ಕರೆದೊಯ್ದರು. ಬಿ.ಸರೋಜದೇವಿ ಕಿತ್ತೂರು ರಾಣಿ ಪಾತ್ರದಲ್ಲಿ ಎಷ್ಟು ಅದ್ಭುತವಾಗಿ, ಶೌರ್ಯ ಪರಾಕ್ರಮಗಳ ಮೂರ್ತಿಯಾಗಿ,



ಸಾಕ್ಷಾತ್ ಕಿತ್ತೂರು ರಾಣಿಯೇ ಬಂದಿರುವಳೇನೋ ಎಂಬಂತೆ ಅಭಿನಯಿಸಿದ್ದರು. ನನಗೆ ಅವರಂತೆ ಆಗಬೇಕೆಂಬ ಹುಚ್ಚು ಹಟದ ಚಟ ಹತ್ತಿಬಿಟ್ಟಿತು. ಹೌದು, ಯಾಕಾಗಬಾರದು? ನೃತ್ಯಗಾರ್ತಿ ಯಾಗುವುದಕ್ಕಿಂತಲೂ ಸಿನಿಮಾ ನಟಿಯಾದರೆ ಹೆಚ್ಚಿನ ಖ್ಯಾತಿ ಸಿಗಬಹುದು ಎನಿಸತೊಡಗಿತು. ಆದರೆ ಅನಿಸಿಕೆಗಳಿಗೆ. ಆಸೆಗಳಿಗೆ ಅವಕಾಶಗಳು ಬೇಕಲ್ಲವೇ? ಆದರೂ ಆ ಆಸೆ ನನ್ನನ್ನು ಹಿಂಸಿಸತೊಡಗಿತು. ಯಾವುದರಲ್ಲಿಯೂ ನನಗೆ ಆಸಕ್ತಿಯೇ ಇಲ್ಲದಾಯಿತು. ನಿಂತರೆ ಕುಳಿತರೆ ಸಿನಿಮಾನಟಿಯಾಗುವ ಗುರಿ. ನಟಿಯಾದಂತೆ ಕನಸುಗಳು! ಆಗ ನಾನು ಕಾಲೇಜಿಗೆ ಸೇರಿದ್ದೆ. ಮೊದಲಿನಿಂದ ಓದಿನ ಬಗ್ಗೆ ನನಗೆ ಆಸಕ್ತಿ ಅಷ್ಟಕಷ್ಟೇ! ಇನ್ನು ಸಿನಿಮಾ ಗುಂಗು ಹತ್ತಿದ್ದೇ ಮುಗಿದೇ ಹೋಯಿತು. ಯಾರು ಎಷ್ಟು ಹೇಳಿದರೂ ನನಗೆ ಅವರ ಮಾತು ತಲೆಗೇ ಹೋಗುತ್ತಿರಲಿಲ್ಲ. ಕಾಲೇಜು ನನಗೆ ಸೆರಮನೆಯಂತೆ ಕಾಣುತ್ತಿತ್ತು. ಬಲವಂತಕ್ಕೆ ಮೊದಲೊಂದಷ್ಟು ದಿನ ಕಾಲೇಜಿಗೆ ಹೋದರೂ ನನ್ನ ಧ್ಯಾನ ಮತ್ತೆಲ್ಲೋ, ನನ್ನ ಗೆಳತಿಯರೆಲ್ಲ ಅದನ್ನು ಬೇರೆ ಏನೋ ಆಗಿ ಅರ್ಥಮಾಡಿಕೊಂಡು ಈಗಲೇ ನನಗೆ ಪ್ರೇಮದ ಹುಚ್ಚು ಹತ್ತಿದೆ ಎಂದು ಕೀಟಲೆಮಾಡಿ ನಗುತ್ತಿದ್ದರು. ಒಂದಷ್ಟು ಸಲ ತರಗತಿಯಲ್ಲಿಯೂ ಟೀಚರ್ಸ್‌ಗಳಿಂದ ಬೈಸಿಕೊಂಡದ್ದೂ ಉಂಟು. ಆದರೇನು ಮಾಡುವುದು. ಅದೆಲ್ಲವೂ ನನಗೆ ಗೋರ್ಕಲ್ಲ ಮೇಲೆ ಮಳೆ ಬಿದ್ದ ಹಾಗೆ ಅನಿಸುತ್ತಿತ್ತು. ದೇವರು ನನಗೊಂದು ಅವಕಾಶ ಕಲ್ಪಿಸಬಾರದೇ? ಎಂದು ಆರ್ತವಾಗಿ ಪ್ರಾರ್ಥಿಸುತ್ತಿದ್ದೆ..... ಆದರೇನು? ಪ್ರಾರ್ಥನೆಗೆಲ್ಲಾ ಫಲಿಸುವಂತಿದ್ದರೆ. ಈ ಭೂಮೀಲಿ ಅಸುಖಿಗಳು, – ನತದೃಷ್ಟರು ಯಾರೂ ಇರುತ್ತಲೇ ಇರಲಿಲ್ಲ! ನನ್ನ ಚಿಕ್ಕಮ್ಮ ಚಿಕ್ಕಪ್ಪ ತುಂಬಾ ದೊಡ್ಡ ಕಲಾವಿದರಾಗಿದ್ದುದರಿಂದ. ಅವರಿಗೆ ಸಿನಿಮಾ ಕಲಾವಿದರು ಅಥವಾ ಸಿನಿಮಾರಂಗದವರು ಪರಿಚಯವಿದ್ದೇ ಇರುತ್ತಾರೆಂದು ಅವರನ್ನು ಪೀಡಿಸತೊಡಗಿದೆ. ನನ್ನ ಕಾಟ ಅವರಿಗೆ ಅತಿಯಾಯಿತೆನಿಸಿರಬೇಕು. ಅವರು ತಮಗೆ ತುಂಬಾ ಹತ್ತಿರದ ಗೆಳೆಯರಾದ ಶ್ರೀಕಂಠಯ್ಯನವರ ಗೆಳೆಯ ಶಿವಕುಮಾರ್ ಎನ್ನುವವರಿಗೆ ತಿಳಿಸಿರಬೇಕು.

ಒಂದು ದಿನ ಇದ್ದಕ್ಕಿದ್ದಂತೆ ಚಿಕ್ಕಪ್ಪನ ಗೆಳೆಯರಾದ ಶ್ರೀಕಂಠಯ್ಯ ಮತ್ತು ಅವರ ಗೆಳೆಯರಾದ ಶಿವಕುಮಾರ್ ಎನ್ನುವವರು ನಮ್ಮ ಮನೆಗೆ ಬಂದರು. ಮನೆಯಲ್ಲಿ ಅವರಿಗೆ ತೋರುತ್ತಿದ್ದ ಗೌರವ ಪ್ರೀತಿಗಳು ಸಂಬಂಧದ ಗಾಢತೆಯನ್ನು ಹೇಳುತ್ತಿತ್ತು. ನಾನು ಅವರು ಬಂದಾಗ ಸಂಕೋಚದಿಂದ ಒಳಗೇ ಇದ್ದೆ. ಚಿಕ್ಕಪ್ಪ ಜಾಣತನದಿಂದ ಈ ಅವಕಾಶದ ಪ್ರಯೋಜನ ಪಡೆದುಕೊಳ್ಳಬೇಕೆಂದು ಯೋಚಿಸಿದರೊ ಏನೋ! ನನ್ನನ್ನು ಕರೆದು ಪರಿಚಯ



ಮಾಡಿಸಿದರು... ನೋಡಿ ಶ್ರೀಕಂಠಯ್ಯನವರೆ, ಇವಳು ನನ್ನ ಅಣ್ಣನ ಮಗಳು. ತುಂಬಾ ಚೆನ್ನಾಗಿ ಡ್ಯಾನ್ಸ್ ಮಾಡುತ್ತಾಳೆ. ನಾಟಕಗಳಲ್ಲಿ ಅಭಿನಯಿಸಿದ್ದಾಳೆ" ಎಂದು ನನ್ನ ಬಗ್ಗೆ ತಿಳಿಸಿ, "ಕಲ್ಪನಾ ಅಣ್ಣಾವರಿಗೆ ನಮಸ್ಕಾರ ಮಾಡಿ ಆಶೀರ್ವಾದ ತಗೋ. ನಿನ್ನಾಸೆ ಪೂರೈಸಬೇಕಾದರೆ ಇವರ ಆಶೀರ್ವಾದ ಬಹಳ ಮುಖ್ಯ" ಎಂದು ನನಗೆ ಹೇಳಿದಾಗ, ಶ್ರೀ ಕಂಠಯ್ಯ ಅವರು ನಗುತ್ತಾ, "ಏನಮ್ಮಾ ನಿನ್ನಾಸೆ?" ಅಂದರು. ನನಗೆ ಸ್ವಲ್ಪ ಸಂಕೋಚವೆನಿಸಿತು. ಸುಮ್ಮನಿದ್ದೆ. ಹೇಗೆ ಹೇಳಬೇಕು, ಏನು ಹೇಳಬೇಕೆಂಬುದು ನನಗೆ ತೋಚಲಿಲ್ಲ. ನನ್ನ ಮುಜುಗರ ಸಂಕೋಚಗಳನ್ನು ಗಮನಿಸಿ "ಹೇಳಮ್ಮಾ ಪರವಾಗಿಲ್ಲ. ನಾನು ಬೇರೆಯಲ್ಲಿ, ನಿಮ್ಮ ಚಿಕ್ಕಪ್ಪನ ಹಾಗೇ!" ಎಂದು ಧೈರ್ಯ ಹೇಳಿದ ಕೂಡಲೇ, 'ಅಂಕಲ್, ನನಗೆ ಸಿನಿಮಾದಲ್ಲಿ ಪಾರ್ಟ್ ಮಾಡಬೇಕೆನ್ನೊ ಆಸೆ. ನೀವು ನನಗೆ ಒಂದೇ ಒಂದು ಅವಕಾಶ ಕೊಟ್ಟರೆ ಸಾಕು. ನಾನು ಚೆನ್ನಾಗಿ ಆ್ಯಕ್ಟ್‌ಮಾಡಿ ಸೈ ಅನಿಸಿಕೊಳ್ತೇನೆ" ಎಂದೆ. ನನ್ನ ಮಾತಿನ ರೀತಿ ಅವರಿಗೆ ಹೇಗೆ ಅನ್ನಿಸಿತೋ ಗೊತ್ತಿಲ್ಲ. ಅವರು ನಕ್ಕರು. ಮತ್ತು ಶಿವಕುಮಾರ್ ಅವರತ್ತ ತಿರುಗಿ' ಶಿವಕುಮಾರ್, ಕೇಳಿದಿರಾ ಹುಡುಗಿಯ ಆಸೆ! ನಿಮಗೆ ಹೇಗಿದ್ದರೂ ರಾಜಕುಮಾರ್, ನರಸಿಂಹರಾಜು ಮತ್ತು ಇನ್ನೂ ಅನೇಕ ಸಿನಿ ದಿಗ್ಗಜರ ಪರಿಚಯವಿದೆ. ಹುಡುಗಿ ಆಸೆ ಏನೂಂತ ಹೇಳಿದ್ದಾಳೆ. ಹೇಗಾದರೂ ಮಾಡಿ ಒಂದು ಚಾನ್ಸ್ ಕೊಡಿಸಬಹುದಲ್ಲ! – ಎಂದಿದ್ದಕ್ಕೆ, 'ಶಿವಕುಮಾರ್,"

ಕೊಡಿಸುವುದು ನನಗೇನೂ ದೊಡ್ಡ ಸಮಸ್ಯೆಯಲ್ಲ. ಆದರೆ ಹುಡುಗಿಗೆ ಅಭಿನಯದ ಅನುಭವ ಬೇಕು. ಮೊದಲು ನಾಟಕಗಳಲ್ಲಿ ಪಾರ್ಟು ಮಾಡ್ತಾ ಅನುಭವ ಪಡೆದುಕೊಳ್ಳಲಿ, ಆ ಮೇಲೆ ನಾನೇ ಈ ಹುಡುಗಿಗೆ ಒಳ್ಳೆ ಚಾನ್ಸ್ ಕೊಡಿಸ್ತೇನೆ. ಬೇಕಾದರೆ ನಾನೇ ಬಳ್ಳಾರಿಯ 'ಲಲಿತಮ್ಮ ನಾಟಕ ಕಂಪನಿಗೆ ಸೇರಿಸುತ್ತೇನೆ' – ಎಂದರು.

ನನ್ನ ಚಿಕ್ಕಪ್ಪ, ಚಿಕ್ಕಮ್ಮ ಕೂಡಲೇ ಒಪ್ಪಿಗೆ ಕೊಟ್ಟರು. ನನಗೇಕೋ ಅಷ್ಟಾಗಿ ಸಮಾಧಾನವಾಗಲಿಲ್ಲ. ನೇರವಾಗಿ ಸಿನಿಮಾದಲ್ಲಿಯೇ ಕಾಣಿಸಿಕೊಳ್ಳೋ ತನಕ. ಆದರೇನು ಮಾಡೋದು. ವಿಧಿಯಾಟ, ಹಿರಿಯರ ಬಲವಂತ. ಲಲಿತಮ್ಮ ನಾಟಕ ಕಂಪೆನಿಗೇನೋ ಸೇರಿದೆ. ಆದರೆ ಅಲ್ಲಿ ನನಗಾದದ್ದು ಬರೀ ನಿರಾಶೆ. ಸುಮ್ಮನೆ ಸಭೆಗಳಲ್ಲಿ ಇಲ್ಲವೇ ಇನ್ನ್ಯಾವುದೋ ನೃತ್ಯದ ಸನ್ನಿವೇಶಗಳಲ್ಲಿ ನೃತ್ಯ ಮಾಡೋದು ಬಿಟ್ಟರೆ ನನಗೆ ಬೇರೆ ಯಾವುದೇ ಪಾರ್ಟು ಸಿಗುತ್ತಿರಲಿಲ್ಲ. ಮನಸ್ಸು ರೋಸಿ ಹೋಯಿತು. ಬರೀ ಕುಣಿತಲೇ ಜೀವನ ಪೂರ್ತಿ ಸಾಯಬೇಕಾಗುತ್ತೋ ಏನೋ ಅನ್ನೋ ಭಯ ನನಗೆ ಶುರುವಾಯಿತು.

ನಾನು ನನ್ನ ಅಸಮಾಧಾನವನ್ನು ತೋರಿಸಿ, ಕಂಪನಿ ಬಿಟ್ಟು ಹೋಗುವುದಾಗಿ ಹೆದರಿಸಿದೆ. ಅಷ್ಟರಲ್ಲಿ ನನ್ನ ಅದೃಷ್ಟವೆಂಬಂತೆ ಮಂಗಳೂರಿಗೆ "ಸ್ತ್ರೀ ನಾಟಕ ಮಂಡಳಿ" ಬಂತು. ಅಲ್ಲಿಯೇ ಬೀಡುಬಿಟ್ಟು ನಾಟಕಗಳನ್ನು ಪ್ರದರ್ಶಿಸುತ್ತಿದ್ದರು. ಅದರಲ್ಲಿ ನನಗೆ ಅಭಿನಯಿಸಲು ಆಹ್ವಾನ ಬಂತು. ಆದರೆ ನನ್ನಪ್ಪ ಅಮ್ಮನಿಗೆ ನಾಟಕಗಳಲ್ಲಿ ಪಾರ್ಟು ಮಾಡೋದು ಸುತರಾಂ ಇಷ್ಟವಿರಲಿಲ್ಲ. ಅವರಿಗೆ ನಾನು ಚೆನ್ನಾಗಿ ಓದಿ ವಿದ್ಯಾವಂತಳಾಗಿ ಯಾವುದಾದರೂ ಉನ್ನತ ಅಧಿಕಾರದಲ್ಲಿ ಇರಬೇಕೆಂಬ ಕನಸು. ಆದರೆ ನನಗೆ ಅಭಿನಯದ ಹುಚ್ಚು. ಇದರಿಂದ ಬಿಡಿಸಿಕೊಂಡರೆ ನಿಜವಾಗಿಯೂ ನನಗೆ ಹುಚ್ಚು ಹಿಡಿಯುತ್ತೇಂತ ಚಿಕ್ಕಪ್ಪ, ಚಿಕ್ಕಮ್ಮರಲ್ಲಿ ನನ್ನ ಅಳಲು ತೋಡಿಕೊಂಡೆ. ಅವರಿಬ್ಬರು ಹೇಗೋ ಅಪ್ಪ ಅಮ್ಮನನ್ನು ಸಮಾಧಾನ ಪಡಿಸಿ ಒಪ್ಪಿಸಿದರು.

ನಾಟಕ ಮಂಡಳಿ ಸೇರಿದೆ. ಊರೂರು ಅಲೆಯುತ್ತಾ ವಿಭಿನ್ನ ಪಾತ್ರಗಳನ್ನು ಅಭಿನಯಿಸುತ್ತಾ, ಹೊಸ ಊರುಗಳು, ಭಾಷೆಗಳು, ಜನಗಳು–ಒಂದು ಬಗೆಯ ಹೊಸ ಹೊಸ ಅನುಭವ ರೋಚಕವೆನಿಸುತ್ತಿತ್ತು. ಈ ವೃತ್ತಿ ಬದುಕು ನನಗೆ ಹೊಸ ಹೊಸ ಪಾಠಗಳನ್ನು ಕಲಿಸಿತು. ಬದುಕು ಏನೆಂಬುದು ಅರ್ಥವಾಗತೊಡಗಿತ್ತು. ಕೊಂಕಣಿ ಮತ್ತು ತುಳು ಮಾತ್ರ ಬಲ್ಲವಳಾಗಿದ್ದ ನನಗೆ ನಾಟಕಗಳಿಂದಾಗಿ ಕನ್ನಡ ಭಾಷೆಯ ಸೊಗಸು ಏನೆಂದು ತಿಳಿಯಿತು. ಅದರ



ಬಗ್ಗೆ ಪ್ರೀತಿ ಬೆಳೆಸಿಕೊಂಡೆ ಆ ಭಾಷೆಯ ಪುಸ್ತಕಗಳನ್ನು ಬಿಡುವಾದಗಲೆಲ್ಲ. ಓದತೊಡಗಿದೆ. ನಮ್ಮ ನಾಟಕಗಳನ್ನು ನೋಡಲು ಸಾಹಿತಿಗಳು, ಕಲಾವಿದರು ಬರುತ್ತಿದ್ದರು. ನನ್ನ ಅಭಿನಯವನ್ನು ಮೆಚ್ಚಿ ಮುಕ್ತವಾಗಿ ಹೊಗಳಿದಾಗ ನನಗೆ ಸ್ವರ್ಗ ಮೂರೇ ಗೇಣು! ಎನಿಸಿತು. ಕೂಡಲೇ ಹೀಗೆ ಸಿನಿಮಾದಲ್ಲೂ ನಾನು ಮಿಂಚಿದರೆ! ಓಹ್! ಎಂದುಕೊಂಡು ಖುಷಿ ಪಟ್ಟೆ. ಮೂರು ವರ್ಷದ ಕರಾರಿಗೆ ಒಪ್ಪಿಕೊಂಡು ಕಂಪನಿಯಲ್ಲಿದ್ದೆ. ಅದು ಮುಗಿಯುತ್ತಿದ್ದಂತೆ ಮಂಗಳೂರಿಗೆ ಹೊರಟು ನಿಂತೆ. ಕಂಪನಿ ಮಾಲೀಕರು ಇನ್ನೂ ಒಂದೆರಡು ವರ್ಷ ಜೊತೆಗಿರಲು ಹೇಳಿದರೂ ನನಗ್ಯಾಕೋ ನಾಟಕಗಳ ಪರಿಸರದಲ್ಲಿಯೇ ಇರಲು ಒಪ್ಪಿಗೆಯಾಗಲಿಲ್ಲ. ನನ್ನ ಕನಸುಗಳು ಏನಾಗುವುವೋ ಎಂಬ ಭೀತಿ, ತಲ್ಲಣ, ಹತಾಶೆ, ನಿರಾಶೆಗಳಲ್ಲಿಯೇ ಕಾಲ ಸವೆದು ಹೋಗುತ್ತಿತ್ತು. ಅಪ್ಪ. ಅಮ್ಮರಿಗಂತೂ ನನ್ನ ಮೇಲಿನ ಸಿಟ್ಟು ಇದ್ದೇ ಇತ್ತು. ಈ ಕಡೆ ಓದೂ ಇಲ್ಲದೆ ಆ ಕಡೆ ನಾಟಕಗಳೂ ಇಲ್ಲದೆ ಹಟಮಾರಿತನದಲ್ಲಿ ಸುಮ್ಮನೆ ಕುಳಿತಿದ್ದು ಅಸಮಾಧಾನಕ್ಕೆ ಕಾರಣ ಅನ್ನೋದು ಗೊತ್ತಿದ್ದರೂ, ಚಿಗುರೊಡೆಯುತ್ತಿದ್ದ ಆಸೆಯನ್ನು ಚಿವುಟಲು ನನ್ನಿಂದ ಸಾಧ್ಯವಾಗಲಿಲ್ಲ.

ಚಿಕ್ಕಪ್ಪ ಮಾತ್ರ ನನ್ನಾಸೆಗೆ ನೀರೆರೆದು ಪೋಷಿಸುತ್ತಿದ್ದರು. ಯಾರು ಯಾರನ್ನೋ ಭೇಟಿಯಾಗುತ್ತಿದ್ದರು. ಎಷ್ಟು ಪ್ರಯತ್ನಗಳಿದ್ದರು ಫಲ ಮಾತ್ರ ಸಿಗುತ್ತಿರಲಿಲ್ಲ. ಈಗ ನನ್ನಾಸೆ ಪೂರ್ತಿಯಾಗಬೇಕಾದರೆ ಮಂಗಳೂರು ಬಿಟ್ಟು ಮದ್ರಾಸಿಗೆ ವಲಸೆ ಹೋಗುವುದೊಂದೇ ದಾರಿ ಅನ್ನೋ ವಿಷಯ ಹೊಳೆದ್ದದ್ದೇ, ಮದ್ರಾಸಿಗೆ ಹೊರಟು ನಿಂತೆವು.

ಅಮ್ಮ ನಾನು ಶಿವಕುಮಾರರ ಜೊತೆ ಮದ್ರಾಸಿಗೆ ಬಂದಿಳಿದೆವು. ಸಿನಿಮಾ ಆಕಾಂಕ್ಷೆಗಳಿಗೆ ಮದ್ರಾಸು ಆಗ ಅವಕಾಶಗಳ ಅಮರಾವತಿಯಾಗಿತ್ತು. ಕನ್ನಡ ಚಿತ್ರಗಳೆಲ್ಲಾ ಇಲ್ಲಿಯೇ ಹೆಚ್ಚಾಗಿ ತಯಾರಾಗುತ್ತಿದ್ದವು. ಪಾಪ! ಶಿವಕುಮಾರ್ ಅವರು ನನ್ನ ಕನಸಿನ ಸಾಕ್ಷಾತ್ಕಾರಕ್ಕಾಗಿ ಪರದಾಡುತ್ತಿದ್ದರು. ಅಮ್ಮನನ್ನು ನರಸಿಂಹರಾಜು ಮನೆಯಲ್ಲಿರಿಸಿದ್ದರು. ಬೆಳಗಿನಿಂದ ಸಂಜೆವರೆಗೆ ಅಲೆದಾಟ. ಪಂತುಲು ಅಂಥವರನ್ನೆಲ್ಲಾ ಭೇಟಿ ಮಾಡಿ ಬಂದ ವಿಷಯ ಹೇಳಿದರು. ನನಗೋ ಒಳಗೊಳಗೇ ನಿರಾಶೆಯ ದುಃಖ

ಒಂದು ದಿನ ಇದ್ದಕ್ಕಿದ್ದಂತೆ ಶಿವಕುಮಾರ್ ಅವರು ನನ್ನ ಬಳಿಗೆ ಬಂದು, ಕೂಡಲೇ ಪಂತುಲು ಅವರನ್ನು ಭೇಟಿ ಮಾಡಬೇಕಾಗಿರುವುದರಿಂದ ಸಿದ್ದವಾಗಲು ಹೇಳಿದರು. ನನಗೆ ದಿಗ್ಭ್ರಮೆ. ಆ ಕಾಲಕ್ಕೆ ಪಂತುಲು ಅವರು ಬಹುದೊಡ್ಡ ನಿರ್ದೇಶಕರು, ನಿರ್ಮಾಪಕರೂ ನಟರೂ ಆಗಿ, ಹೆಸರು ಮಾಡಿದ್ದರು. ಅಂಥವರ ಮುಂದೆ ಹೋಗಿ ನಿಲ್ಲಲು ಅಳುಕು.

ಅವರ ಮುಂದೆ ಹೋಗಿ ನಿಂತು ನಮಸ್ಕರಿಸಿದೆ. ನನ್ನನ್ನು ನಖಶಿಖಾಂತ ಗಂಭೀರವಾಗಿ ನೋಡಿದರು. ಒಂದು ಮುಗುಳ್ನಗೆ ನಕ್ಕರು. ಆ ನಗುವಿನಲ್ಲಿ ಮೆಚ್ಚುಗೆ, ಭರವಸೆ ತುಂಬುವ ಭಾವವಿತ್ತು. ಮೆಲ್ಲಗೆ ಕೇಳಿದರು.– ಏನಮ್ಮಾ ಸಿನಿಮಾದಲ್ಲಿ ಮಾಡುವ ಆಸೆಯೇನು? ಎಂದು ಪ್ರಶ್ನಿಸಿದರು. ನಾನು ಸ್ವಲ್ಪ ಸಂಕೋಚ, ಅಳುಕಿನಿಂದಲೇ – "ಸಾರ್ ಅದೇ ನನ್ನ ಜೀವನದ ಪರಮ ಗುರಿಯಾಗಿದೆ. ತಾವು ಮಾಡಿದ 'ಕಿತ್ತೂರು ರಾಣಿ ಚೆನ್ನಮ್ಮ' ಸಿನಿಮಾ ನೊಡಿದೆ. ಬಿ. ಸರೋಜದೇವಿಯವರ ಅಭಿನಯ ನೋಡಿದ ಮೇಲಂತೂ ನಾನೂ ಅವರ ಹಾಗೆ ಅದ್ಭುತವಾಗಿ ನಟಿಸಿ ಹೆಸರು ತೊಗೊಳ್ಬೇಕೂಂತ ತೀರ್ಮಾನಕ್ಕೆ ಬಂದು ಬಿಟ್ಟಿದ್ದೀನಿ. ನನ್ನಗೊಂದೇ ಒಂದು ಅವಕಾಶ ಕೊಡಿ ಸಾರ್, ನನ್ನೆಲ್ಲ ಸಾಮರ್ಥ್ಯವನ್ನು ಬಳಸಿಕೊಂಡು ನೀವೆಲ್ಲಾ ಮೆಚ್ಚುವಂತೆ ಅಭಿನಯಿಸುತ್ತೇನೆ. ನಿಮ್ಮ ನಿರೀಕ್ಷೆಗೆ ದ್ರೋಹ ಮಾಡೊಲ್ಲಾ' ಎಂದೆ ನನ್ನ ದನಿಯಲ್ಲಿನ ಆತ್ಮ ವಿಶ್ವಾಸ, ಬಯಕೆಯ ತುಡಿತ ಅವರನ್ನು ತಟ್ಟಿರಬೇಕು. "ನೋಡಮ್ಮ..... ಏನೆಂದೆ ನಿನ್ನ ಹೆಸರು! ಕಲ್ಪನಾ... ಹಾಂ...ಕಲ್ಪನಾ.. ನಿನ್ನಾಸೆ ಎಷ್ಟು ಬಲವತ್ತರವಾಗಿದೆ. ಅನ್ನೋದು ನನಗೆ ಅರ್ಥ ಆಗಿದೆ. ಖಂಡಿತ ನಿನಗೆ ನಿರಾಶೆ ಮಾಡೋಲ್ಲ. ಆದರೂ ಒಂದು ಮಾತು ಕೇಳ್ತೇನೆ..... ಇದಕ್ಕೆ ಮೊದಲು ನಿನಗೆ ಅಭಿನಯದ ಅನುಭವ ಏನಾದರೂ ಇದೆಯೇನು?" ಎಂದರು.

ನಾನು ಪಂತುಲು ಅವರಿಗೆ ಕಂಪನಿ ನಾಟಕಗಳಲ್ಲಿ ಅನುಭವ ಇರುವ ವಿಷಯವಿವರಿಸಿದೆ. ಅವರಿಗೂ ಸ್ವಲ್ಪ ಸಮಾಧಾನವಾದಂತೆ ಕಾಣಿಸಿತು. "ಕಲ್ಪನಾ ನೀನು ಅದೃಷ್ಟವಂತೆ. ನೀನು ಬರೋಕೆ ಮೊದಲೇ ನಿನ್ನ ಭಾವಚಿತ್ರಗಳನ್ನು ನೋಡಿದ್ದೆ, ಅದರೆ ಖುದ್ದಾಗಿ ನೋಡದೆ ಯಾವುದನ್ನೂ ನಿರ್ಧರಿಸಬಾರದು ಎಂದುಕೊಂಡಿದ್ದಕ್ಕೆ ನಿನ್ನನ್ನು ಬರಮಾಡಿಕೊಂಡೆ. ನಾನು ತಯಾರಿಸುತ್ತಿರುವ 'ಸಾಕು ಮಗಳು' ಚಿತ್ರದಲ್ಲಿ ನಿನಗೆ 'ನಾಯಕಿ' ಪಾತ್ರವನ್ನೇ ಕೊಡುತ್ತೇನೆ. ಸಂತೋಷ ತಾನೇ!" ಆದರೆ ಒಂದು ಎಚ್ಚರಿಕೆ, ಈ ಚಿತ್ರದಲ್ಲಿನ ನಿನ್ನ ಅಭಿನಯ ಸಾಮರ್ಥ್ಯವೇ ಚಿತ್ರರಂಗದಲ್ಲಿನ ನಿನ್ನ ಯಶಸ್ಸಿಗೆ. ಅದೃಷ್ಟಕ್ಕೆ ಮೆಟ್ಟಿಲಾಗುತ್ತದೆ.

ಇದನ್ನು ಮರೆಯಬೇಡ' ಎಂದು ಒಮ್ಮೆಲೇ ನನ್ನಲ್ಲಿ ಉತ್ಸಾಹ, ಭರವಸೆಗಳನ್ನು ಹುಟ್ಟು ಹಾಕಿ ಯಶಸ್ಸನ್ನು ಕೋರಿ ಬೀಳ್ಕೊಟ್ಟರು.

ಈ ಒಂದು ಅವಕಾಶ ನನ್ನನ್ನು ಎಲ್ಲಿಂದ ಎಲ್ಲಿಗೋ ಕೊಂಡೊಯ್ಯುತ್ತದೆ ಎಂದು ನಾನು ಹಗುರಾದೆ. ಗಾಳಿಯಲ್ಲಿ ತೇಲಾಡಿದೆ. ಜಗತ್ತೇ ನನ್ನ ಪಾಲಿಗೆ ಆನಂದಮಯವಾಗಿ ಭಾಸವಾಗುತ್ತಿತ್ತು. ಬದುಕಿನ ಹೊಸ ಅಧ್ಯಾಯ ಪ್ರಾರಂಭವಾಯಿತು. ನನಗೆ ಲಭ್ಯವಾದ ಅವಕಾಶವನ್ನು ಸಾರ್ಥಕವಾಗಿ ಬಳಸಿಕೊಳ್ಳಬೇಕು. ನನ್ನ ಈ ಚಲನಚಿತ್ರರಂಗದ ಪ್ರಯಾಣಕ್ಕೆ ನಿಲುಗಡೆಯೆಂಬುದೇ ಇರಬಾರದು. ಏನೇ ನೋವು, ಸಂಕಟ, ಸಂಘರ್ಷಗಳು ಎದುರಾದರೂ ಸೋಲದೆ, ಸಾಯದೆ ಚಿತ್ರರಂಗದ ಶಿಖರಾಗ್ರದ ಅಭಿನೇತ್ರಿ ಎನಿಸಿಕೊಳ್ಳಲೇ ಬೇಕು' ಎಂದೆಲ್ಲ ಯೋಚಿಸಿದೆ.



ನನಗೆ ಗೊತ್ತು, ನಾನು ಹಟಮಾರಿ. ಖಂಡಿತ ವಾದಿ, ನಿಷ್ಠುರಳು, ಅನ್ಯಾಯ, ನನಗಾಗಲೀ ಅಥವಾ ನನ್ನೆದುರಿಗೆ ಬೇರೆಯವರಿಗೇ ಆಗಲಿ, ಸಹಿಸುವುದು ನನ್ನಿಂದ ಸಾಧ್ಯವಾಗುವುದಿಲ್ಲ. ಆದರೂ ಕೆಲವೊಮ್ಮೆ ನನ್ನಿಂದ ಸಾಧ್ಯವಾಗುವುದಿಲ್ಲ. ಆದರೂ ಕೆಲವೊಮ್ಮೆ ನಂಜು ನುಂಗಿಕೊಂಡು ಸಹಿಸಿಕೊಳ್ಳಬೇಕಾದ ಅನಿವಾರ್ಯತೆ ಬರುತ್ತದೆಂಬುದು ನನ್ನ ಚಿತ್ರರಂಗದ ಅನುಭವಗಳಿಂದ ಕಂಡುಕೊಂಡೆ. ಅನೇಕ ವೇಳೆ ನನಗೆ ಅವಮಾನವಾಗುವ ಪ್ರಸಂಗಗಳೂ ಎದುರಾದದ್ದುಂಟು. ನೇರವಾಗಿ ನನ್ನನ್ನು ಟೀಕಿಸಿದ, ಅವ ಹೇಳನ ಮಾಡಿದ ಪ್ರಸಂಗಗಳಿಗೂ ಕಡಿಮೆಯಿರಲಿಲ್ಲ.

ಕನ್ನಡ ಭಾಷೆಯನ್ನು ಚೆನ್ನಾಗಿಯೇ ಮಾತಾಡ ಬಲ್ಲವಳಾಗಿದ್ದೆ. ಆದರೂ ನನ್ನ ಉಚ್ಚಾರಣೆಯಲ್ಲಿ ದೋಷವಿದೆಯೆಂಬ ಕಾರಣಕ್ಕೆ ನನ್ನ ಧ್ವನಿಯನ್ನು 'ಸಾಕು ಮಗಳು' ಚಿತ್ರದಲ್ಲಿ ಡಬ್ ಮಾಡಿಸಲಾಯಿತು. ಇದು ನನಗೆ ತೀರಾ ಅವಮಾನದ ಸಂಗತಿ ಎನಿಸಿತು. ಒಳಗೇ ಕುದಿಯತೊಡಗಿದೆ. ಆದರೆ ಅಸಹಾಯಕತೆ. ಮೊದಲ ಚಿತ್ರದಲ್ಲಿಯೇ ಘರ್ಷಣೆ, ಪ್ರತಿಭಟನೆ ಇತ್ಯಾದಿಗಳು ನನ್ನ ಭವಿಷ್ಯಕ್ಕೆ ಎರವಾಗುವುದೆಂದು ಸುಮ್ಮನಾದೆ. ಆದರೆ ನಾನು ಸುಮ್ಮನೆ ಕೂರಲಿಲ್ಲ. ನನ್ನ ದೌರ್ಬಲ್ಯವನ್ನು ಒಂದು ಸವಾಲಾಗಿ ಸ್ವೀಕರಿಸಿ ಅದನ್ನು ಮೀರಿ ಬೆಳೆಯಲು ಪ್ರಯತ್ನಿಸಿದೆ. ಪದಗಳ ಉಚ್ಚಾರಣೆ, ಧ್ವನಿಯಲ್ಲಿ ಏರಿಳಿತ ಮಾಡುವುದು ಮುಂತಾಗಿ ಚೆನ್ನಾಗಿ ಅಭ್ಯಾಸ ಮಾಡಿ ನನ್ನದೇ ಶೈಲಿಯ ಡೈಲಾಗ್ ಡಿಲಿವರಿಯನ್ನು ರೂಢಿಸಿಕೊಂಡೆ.

ನಾನು ಹೇಳಬೇಕಾದ್ದು ಇನ್ನೊಂದಿದೆ. ನಾನು ಅಭಿನಯಿಸುವ ಚಿತ್ರಕಥೆಯನ್ನು ಮೊದಲು ಚೆನ್ನಾಗಿ ಗ್ರಹಿಸುತ್ತಾ, ಇಡೀ ಕತೆಯ ಸಂಧರ್ಭದಿಂದ ನನ್ನ ಪಾತ್ರದ ಜವಾಬ್ದಾರಿಗಳನ್ನು ಅರ್ಥಮಾಡಿಕೊಳ್ಳುತ್ತಿದ್ದೆ. ನಾನು ಮಾಡುತ್ತಿರುವುದು ಪಾತ್ರವಲ್ಲ; ನಟನೆಯಲ್ಲ. ಅದು ನಾನೇ ಆಗಿ, ಭಾವಿಸುತ್ತಿದ್ದೆ. ನಾನು ನಾನಾಗಿ ಇರುತ್ತಿರಲಿಲ್ಲ. 'ಅನಾಥ ಹೆಣ್ಣು ಮಗಳಾಗಿ, ಯಾರದೋ ಅನುಗ್ರಹದಿಂದ ಒಂದು ಮನೆ ಸೇರಿ, ತಂದೆ ತಾಯಿಗಳ ಪ್ರೀತಿಯ ಅನುಭವದ ಅದೃಷ್ಟ ಪಡೆದು, ಶಿಕ್ಷಣ, ಸಂಗೀತಗಳನ್ನು ಕಲಿತು ಮುಂದುವರೆದು, ಹೆತ್ತ ಸ್ವಂತ ಮಕ್ಕಳಿಂದ ನಿರ್ಲಕ್ಷ್ಯಕ್ಕೆ ಒಳಗಾದ ಸಾಕು ತಂದೆ ತಾಯಿಯರನ್ನು ಸಾಕುಮಗಳಾದವಳು ಪ್ರೀತಿಯಿಂದ ಕರೆದುಕೊಂಡು ಪೋಷಿಸುತ್ತಾಳೆ. ಸಾಕು ಮಗಳಾಗಿ ನನಗೆ ವಹಿಸಿಕೊಟ್ಟಿದ್ದ ಪಾತ್ರವನ್ನು ನಾನು ಸಾಕಷ್ಟು ಶ್ರಮದಿಂದ ಶ್ರದ್ದೆಯಿಂದ ನಿರ್ವಹಿಸಿದೆ.

ಇಲ್ಲಿಂದ ನನ್ನ ಅಭಿನಯದ ಸರಣಿ ಪ್ರಾರಂಭವಾಯಿತು. ಒಂದಾದ ಮೇಲೊಂದು ಕರೆಗಳು ಬರತೊಡಗಿದವು. ಪಂತುಲು ಅವರೇ ನಿರ್ಮಿಸಿದ 'ಚಿನ್ನದ ಗೊಂಬೆ'ಯಲ್ಲಿ ಕೇವಲ ಒಂದು ಸಣ್ಣ ಪಾತ್ರ, ಆದರೂ ಅದನ್ನು ನಿರಾಕರಿಸುವ ದಾಷ್ಟ್ಯ ನನ್ನಲ್ಲಿ ಇರಲಿಲ್ಲ. ಅಲ್ಲದೆ ನಿರಾಕರಿಸುವಷ್ಟು ಮಟ್ಟಕ್ಕೆ ಬಂದಿರಲಿಲ್ಲ. ಅವರು ನನಗೆ ದಾರಿ ತೋರಿದವರು; ಅನ್ನ ಕೊಟ್ಟವರು. ತಿಂಗಳಿಗೆ 500ರೂ ಸಂಬಳ ಪಡೆಯುತ್ತ ಅವರ ಜೊತೆ ಕೆಲಸ ಮಾಡಿದೆ. ಹೀಗಿರುವಾಗ ನನ್ನ ಪಾಲಿಗೆ ಬಂದ ಕಹಿ ಬಟ್ಟಲನ್ನು ಬರಿದು ಮಾಡಲೇ ಬೇಕಿತ್ತು.



'ಚಿನ್ನದ ಗೊಂಬೆ'ಯಲ್ಲಿ ನನ್ನದು ಸಣ್ಣ ಪಾತ್ರವೇ ಆದರೂ, ಚಿತ್ರ ತಂಡದ ಜೊತೆ ಕೆಲಸ ಮಾಡುವಾಗ ಅನೇಕರನ್ನು ಆತ್ಮೀಯರನ್ನಾಗಿ ಪಡೆದೆ. ಆಗತಾನೆ ಪಾದಾರ್ಪಣ ಮಾಡುತ್ತಿದ್ದ ನಾನು, ಅಷ್ಟು ಹೊತ್ತಿಗೆ ಆಗಲೇ ಸಾಕಷ್ಟು ಹೆಸರು ಮಾಡಿ ಮಹಾನ್ ಚಿತ್ರಕಲಾವಿದರೆನಿಸಿಕೊಂಡಿದ್ದ ರಾಜಕುಮಾರ್, ಉದಯಕುಮಾರ್,

ಕಲ್ಯಾಣ ಕುಮಾರ್ ಎಂಬ ಕುಮಾರರತ್ನಂಯರಲ್ಲಿ ಒಬ್ಬರಾಗಿದ್ದ ಕಲ್ಯಾಣಕುಮಾರ್‌ಂತಹವರ ಜೊತೆ ಕೆಲಸ ಮಾಡುವುದನು ಅದೃಷ್ಟವೆಂದೇ ಭಾವಿಸಿದ್ದೆ. ನಿರಂತರ ಸಾಂಗತ್ಯ ನನ್ನನ್ನು ಕಲ್ಯಾಣ್‌ಕುಮಾರ್ ದಂಪತಿ ಜೊತೆ ಬೆಸೆಯಿತು. ಮೊದ ಮೊದಲಿಗೆ ಸ್ವಲ್ಪ ಸಂಕೋಚದಲ್ಲಿಯೇ ಇದ್ದೆ. ಅಪರಿಚಿತ ಜನರ ನಡುವಿದ್ದಾಗ ನಾನೊಂದು ಬಗೆಯ ಏಕಾಂತತೆಯನ್ನು ಬಯಸಿ ಹೊರಡುತ್ತಿದ್ದೆ. ಎಲ್ಲರಿಂದ ದೂರವಾಗಿದ್ದು ನಾನು ನನ್ನ ಭಾವನಾಲೋಕಕ್ಕೆ ಇಳಿದು ಬಿಡುತ್ತಿದ್ದೆ ಇಲ್ಲವೆ ಸುಂದರವಾದದ್ದೇನಾದರೂ ಇದ್ದಲ್ಲಿ ತನ್ಮಯತೆಯೊಂದಿಗೆ ಅವಲೋಕಿಸುತ್ತಿದ್ದೆ. ನನ್ನ ಇಂತಹ ಸ್ಥಿತಿಗಳಲ್ಲಿ ನೋಡಿದ್ದವರಿಗೆ ಎಷ್ಟೋ ಮಂದಿಗೆ, ನನ್ನ ಸ್ವಭಾವ ಮನಸ್ಸು ಅರ್ಥವಾಗುತ್ತಿರಲಿಲ್ಲ. ಅದಕ್ಕೆ ಅಂಥವರೆಲ್ಲ ನನ್ನನ್ನು ತಪ್ಪಾಗಿ ತಿಳಿಯುತ್ತಿದ್ದರು ಮತ್ತು ಅಸಹನೆಯಿಂದ 'ಅಯ್ಯೋ ಅವಳಿಗೆ ಈಗಲೇ ಇಷ್ಟು ಜಂಬ. 'ಅವಳಿಗೆ ಯಾರೂ ಬೇಡ. ಅದೊಂದು ಕಲ್ಲುಕಂಬ' ಮಾತಾಡಿದರೂ ಒಂದೆ ಮಾತನಾಡಿಸದಿದ್ದರೂ ಒಂದೆ. ಯಾರ ಜೊತೆ ಸೇರುವುದೂ ಅವಳಿಗೆ ಇಷ್ಟವಾಗುವುದಿಲ್ಲ' - ಎಂದೆಲ್ಲಾ ಅಪಪ್ರಚಾರಕ್ಕೆ ತಪ್ಪು ಅಭಿಪ್ರಾಯಗಳಿಗೆ ದಾರಿಯಾಗಿತ್ತು. ಹಾಗೆ ನೋಡಿದರೆ ಇದರಲ್ಲಿ ಸ್ವಲ್ಪ ಸತ್ಯವೂ ಇದೆ; ಸುಳ್ಳೂ ಇದೆ ಅನಿಸಿತು. ಅನವಶ್ಯಕವಾಗಿ ಯಾರ ಬಳಿಯೂ ನಾನು ಮೇಲೆ ಬಿದ್ದು ಮಾತಾಡುವುದೇ ಇಲ್ಲ. ಆದರೆ ಹಾಗಂತ ಯಾರಾದರೂ ಪ್ರೀತಿಯಿಂದ ಮಾತಾಡಿಸಲು ಬಂದರೆ ಖಂಡಿತವಾಗಿಯೂ ಅವರನ್ನು ನಿರಾಶೆಗೊಳಿಸಿ ಕಳಿಸುತ್ತಿರಲಿಲ್ಲ. ಆದರೆ ಯಾರಾದರೂ ಚೇಷ್ಟೆಗೋ, ಕೀಟಲೆಗೋ ಇಲ್ಲ ನಿಜವಾಗಿಯೂ ನನ್ನನ್ನು ನೋಯಿಸಬೇಕೆಂಬ ಉದ್ದೇಶದಿಂದ ಉದ್ಧಟ ಪ್ರಶ್ನೆಗಳನ್ನು ಕೇಳಿದರೆ, ಸುಳ್ಳು ಸುಳ್ಳು ಆರೋಪಗಳನ್ನು ಹೇರಿದರೆ ನಾನು ಅಂಥವರನ್ನು ಸುಮ್ಮನೆ ಬಿಡುತ್ತಿರಲಿಲ್ಲ. ನನ್ನ ವ್ಯಕ್ತಿತ್ವಕ್ಕೆ. ಆತ್ಮ ಗೌರವಕ್ಕೆ ನನ್ನ ವಿಶ್ವಾಸಕ್ಕೆ ಆಘಾತಕಾರಿ ಎನಿಸಿದರೆ, ಅವರ ಮುಖದ ನೀರಿಳಿಸಿ ಕಳುಹಿಸುತ್ತಿದ್ದೆ. ಇದು ನನ್ನ ನಿಲುವು; ನನ್ನ ಸ್ವಭಾವ. ನೇರ, ನ್ಯಾಯ ಇರುವಲ್ಲಿ, ಯಾರೇ ಅವಮಾನ, ಆರೋಪಗಳನ್ನು ಸಹಿಸಿಕೊಳ್ಳಬೇಕಾದ್ದಿಲ್ಲ. ಎನ್ನುವುದು ನನ್ನ ನಂಬಿಕೆಯಾಗಿತ್ತು. ಹೀಗಿದ್ದರೂ ನನಗೆ ಅನೇಕ ಸಂದರ್ಭಗಳಲ್ಲಿ ಪ್ರೀತಿ, ಸ್ನೇಹಗಳ ಮಧುರಾನುಭೂತಿಯನ್ನು ಸಾಧ್ಯವಾಗಿಸಿದ ಕೆಲವರಿದ್ದಾರೆ. ಅವರಲ್ಲಿ ಕಲ್ಯಾಣ್ ದಂಪತಿ.



ಒಮ್ಮೆ 'ಚಿನ್ನದ ಗೊಂಬೆ' ಚಿತ್ರೀಕರಣ ಮೈಸೂರಿನ ಬೃಂದಾವನದಲ್ಲಿ ನಡೆಯುತ್ತಿತ್ತು. ಒಂದು ದಿನ ಚಿತ್ರೀಕರಣ ಮುಗಿದು ನಾವು ಇಳಿದುಕೊಂಡಿದ್ದ ಹೋಟೆಲ್ ಕೃಷ್ಣರಾಜಸಾಗರ್'ಗೆ ಹಿಂತಿರುಗಿದೆವು. ನನ್ನ ಹಾಗೆ ಆಗತಾನೇ ಚಿತ್ರರಂಗ ಪ್ರವೇಶ ಮಾಡಿದ್ದ ಜಯ ಲಲಿತ ಅವರ ರೂಂನ ಮುಂದೆ ಕಲ್ಯಾಣ್‌ಕುಮಾರ್, ರೇವತಿ ಕಲ್ಯಾಣ್‌ಕುಮಾರ್ ಮತ್ತು ಇತರರು ಎಲ್ಲಾ ಒಟ್ಟಾಗಿ ಸೇರಿ ಲೋಕಾಭಿರಾಮವಾಗಿ ಮಾತಾಡುತ್ತಾ, ಹರಟೆ ಹೊಡೆಯುತ್ತಾ ಜೋರಾಗಿ ನಗುತ್ತಿದ್ದರು. ಅವರ ನಗು ತಾರಕಕ್ಕೇರಿತ್ತು. ಆದರೆ ನಾನು ಅವರ ಸಂಭಾಷಣೆಯಲ್ಲಿ ಭಾಗಿಯಾಗದೆ ಅವರು ಕುಳಿತಿದ್ದ ಜಾಗದಿಂದ ಸ್ವಲ್ಪ ದೂರದಲ್ಲಿದ್ದ ಕಂಬವೊಂದಕ್ಕೆ ಒರಗಿಕೊಂಡು ಸುತ್ತಲಿನ ಹಸಿರನ್ನು ಅನುಭವಿಸುತ್ತಿದ್ದೆ. ನನಗೆ ಅವರ ಕಡೆ ಲಕ್ಷ್ಯವೇ ಇರಲಿಲ್ಲ.

ಹಾಗೇ ಎಷ್ಟು ಹೊತ್ತು ನಿಂತಿದ್ದೆನೋ ನನಗೇ ಗೊತ್ತಿಲ್ಲ. ಕಲ್ಪನಾ... ಯಾರೋ ಕೂಗಿದಂತಾಯಿತು. ತಿರುಗಿ ನೋಡಿದೆ. ಆಶ್ಚರ್ಯ! ನನ್ನೆದುರು ನಿಂತಿದ್ದವರು ರೇವತಿ ಕಲ್ಯಾಣ್‌ಕುಮಾರ್! ನಾನು ತುಟಿಯರಳಿಸಿ "ಓ ನೀವಾ! ಬನ್ನಿ. ಸಾರಿ, ನೀವು ಬಂದದ್ದನ್ನು ಗಮನಿಸಲಿಲ್ಲ." ಎಂದು ನೋವಿನಿಂದ ಹೇಳಿದೆ. 'ಛೇ! ಛೇ!! ನೀವು ನಮ್ಮಿಂದ ದೂರ ಪರಧ್ಯಾನದಲ್ಲಿ ಒಬ್ಬರೇ ನಿಂತಿದ್ದರಲ್ಲ. ಹಾಗೇ ನಿಮ್ಮನ್ನು ಮಾತಾಡಿಸಿ ಹೋಗೋಣಾಂತ ಬಂದೆ... ನೀವೊಬ್ಬರೇ ಇಲ್ಲೇನು ಮಾಡುತ್ತೀರಿ? ಬನ್ನಿ ಕಲ್ಯಾಣ್ ಕೂಡಾ ಅಲ್ಲಿಯೇ ಇದ್ದಾರೆ. ನಿಮ್ಮ ಬಗ್ಗೆ ಅವರಿಗೆ ತುಂಬಾ ಅಭಿಮಾನ. ಯಾವಾಗಲೂ ನಿಮ್ಮ ಅಭಿನಯದ ಬಗ್ಗೆ ಮೆಚ್ಚಿಕೆಯ ಮಾತುಗಳನ್ನೇ ಹೇಳುತ್ತಿರುತ್ತಾರೆ."

"ಅವರೇನೋ ದೊಡ್ಡ ಮನಸ್ಸಿರುವವರು ಮೆಚ್ಚಿ ಮಾತಾಡುತ್ತಾರೆ. ಆದರೆ ಅದೇಕೋ ಕೆಲವರು ವಿನಾಕರಣ ಸಿಟ್ಟಾಗುತ್ತಾರೆ; ಸಿಡಿಮಿಡಿಗೊಳ್ಳುತ್ತಾರೆ. ನನ್ನ ತಪ್ಪಿಲ್ಲದಿದ್ದರೂ ಅವರೇಕೆ ನನ್ನ ಜೊತೆ ಹಾಗೆ ನಡೆದುಕೊಳ್ಳುತ್ತಾರೆ! ಮೊನ್ನೆ ನೀವೆ ನೋಡಿದಿರಲ್ಲ. ನಿರ್ಮಾಪಕರು ಯಾವ ಕಾರಣಕ್ಕೋ ಏನೋ ಮುನಿದುಕೊಂಡು ನನ್ನ ಜೊತೆ ಅಸಹನೆಯಿಂದ ನಡೆದುಕೊಳ್ಳುತ್ತಿದ್ದುದನ್ನು! ನನಗೆ ನೋವಾಯಿತು ನಿಜ. ಆದರೆ ಅದೆಲ್ಲವನ್ನೂ ನುಂಗಿಕೊಳ್ಳುತ್ತೇನೆ. ನಮ್ಮ ನೋವು, ಸಂಕಟಗಳನ್ನು ಇತರರ ಎದುರು ಹೇಳಿಕೊಂಡು ಅವರ ಸಹಾನುಭೂತಿ ಪಡೆಯುವುದು ನನಗೆ ಬೇಕಿಲ್ಲ. ಇರಲಿ ಇಂಥಾವೆಲ್ಲ ಜೀವನದಲ್ಲಿ ಸಾಮಾನ್ಯ. ಆದದ್ದನ್ನು ಮರೆತು ಅತ್ತ ತಳ್ಳಿ ನಮ್ಮ ಸಂತೋಷವನ್ನು ನಾವೇ ಹುಟ್ಟಿ ಹಾಕಿಕೊಳ್ಳಬೇಕು. ನನ್ನ ಬಗ್ಗೆ ಅಸಹನೆಯಿಂದ ನಡೆದುಕೊಂಡದ್ದು ಸಾಲದೆಂಬಂತೆ, ಎಲ್ಲರ ಮುಂದೆ ನನ್ನನ್ನೆಲ್ಲ. ಎಷ್ಟು ಕೀಳಾಗಿ ನಡೆಸಿಕೊಂಡರು. ಎಲ್ಲರೂ

ಚಿತ್ರೀಕರಣ ಮುಗಿದು ಹಾಯಾಗಿ ತಂಗಾಳಿಗೆ ಮೈಯೊಡ್ಡಿ ಆರಾಮಕುರ್ಚಿಗಳಲ್ಲಿ ಆಸೀನರಾಗಿದ್ದು, ನಾನು ಮಾತ್ರ ನಿಂತಿದ್ದರೂ ಕುಳಿತುಕೊಳ್ಳುವಂತೆ ಹೇಳುವ ಸೌಜನ್ಯವೂ ಇರಲಿಲ್ಲ. ಅವರನ್ನು ಅಲ್ಲಿಯೇ ಸುಟ್ಟು ಭಸ್ಮ ಮಾಡಿ ಬಿಡಬೇಕೆಂಬ ಆವೇಶದಲ್ಲಿದ್ದೆ...... ಆದರೆ..... ಆದರೆ....... ನಿಮ್ಮ ಕಲ್ಯಾಣ್‌ರ ಸೌಜನ್ಯ ನನ್ನನ್ನು ತಣ್ಣಗಾಗಿಸಿ ಬಿಡ್ತು. ಅವರೇ ಕುರ್ಚಿಯನ್ನು ತರಿಸಿ ಹಾಕಿಸಿ ಕುಳಿತುಕೊಳ್ಳಲು ಹೇಳಿದರು". ಎಂದು ನಡೆದ ಘಟನೆಯನ್ನು ನೆನಪಿಸಿದೆ.

ರೇವತಿಯವರದು ಅತ್ಯಂತ ಸ್ನೇಹಶೀಲ ಸ್ವಭಾವ. ನನ್ನನ್ನು ನನ್ನ ಮನಸನ್ನು ಅರ್ಥ ಮಾಡಿಕೊಂಡಿದ್ದರು. ಕಲ್ಯಾಣ್ ದಂಪತಿಗೆ ನನ್ನೆದೆಯಲ್ಲಿ ವಿಶೇಷವಾದ ಸ್ಥಾನವಿತ್ತು. ವ್ಯಕ್ತಿಗಳೆಂದರೆ ಹೀಗಿರಬೇಕು. ಎಂದು ಮೆಚ್ಚಿಕೊಂಡಿದ್ದೆ. ಅನೇಕ ಸಂದರ್ಭಗಳಲ್ಲಿ ನನ್ನ ಪರವಾಗಿ ಮಾತಾಡಿದ್ದರು. ಅವಮಾನಕರವಾದ ರೀತಿಯಲ್ಲಿ, ಕಲಾವಿದರ ಜೊತೆಗೆ ನಡೆದುಕೊಳ್ಳುವವರಿಗೆ ಸಮಾಧಾನವಾಗಿ ಬುದ್ಧಿ ಹೇಳಿದ್ದರು. ನನಗೆ ಅವರು ನೈತಿಕ ಬಲವಾಗಿ ನಿಂತಿದ್ದರು.

ಕುರ್ಚಿಯ ಪ್ರಸಂಗ ಮುಗಿಯಿತೆಂದುಕೊಂಡರೆ ಮತ್ತೊಂದು ಪ್ರಸಂಗ ಎದುರಾಯಿತು. ನನ್ನ ಧ್ವನಿಯ ಬಗ್ಗೆ ಅನೇಕಸಲ ಭಿನ್ನಾಭಿಪ್ರಾಯ ಮೂಡುತ್ತಿತ್ತು. ಮತ್ತೊಂದು ಸಲ ನಿರ್ಮಾಪಕರೊಬ್ಬರು ನನ್ನ ಧ್ವನಿ ಕರ್ಕಶವಾಗಿದೆ ಎಂದು ಆರೋಪಿಸಿ, ಚಿತ್ರದಲ್ಲಿ ನನ್ನ ಧ್ವನಿಗೆ ಬೇರೊಬ್ಬರ ಧ್ವನಿ ಜೋಡಿಸುವ ಹುನ್ನಾರ



ನಡೆಯಿತು. ನನಗೆ ಇದರ ವಿಷಯ ಗೊತ್ತಾಗಿರಲಿಲ್ಲ. ಆದರೆ ಕಲ್ಯಾಣ್‌ಜಿಯವರಿಗೆ ಗೊತ್ತಾಗಿ ತಕ್ಷಣ ನಿರ್ಮಾಪಕರ ಬಳಿಗೆ ಹೋಗಿ ವಾದ ಮಾಡಿ, ವೈಯಕ್ತಿಕ ದ್ವೇಷದಿಂದ ಒಬ್ಬರ ಬದುಕನ್ನು ಹಾಳುಮಾಡಬಾರದೆಂದು ಎಚ್ಚರಿಸಿ. ಕಡೆಗೆ ನನ್ನದೇ ಧ್ವನಿ ಇರಿಸಿಕೊಳ್ಳುವಂತೆ ಮಾಡಿದ್ದು ನನಗೆ ನಂತರ ತಿಳಿದು ಬಂತು. ಕಲ್ಯಾಣ್ ಅವರು ಅದೇನೋ ನನ್ನ ಬಗ್ಗೆ ತುಂಬಾ ಭರವಸೆ ಇರಿಸಿಕೊಂಡಿದ್ದರು. ಅನೇಕ ಸಲ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಾನು ಶ್ರೇಷ್ಠ ಕಲಾವಿದೆ ಆಗುತ್ತೇನೆ ಎಂದು ಭವಿಷ್ಯ ನುಡಿಯುತ್ತಲೇ ಇದ್ದರು.

ರೇವತಿಯವರಂತೂ ನನ್ನೆಲ್ಲಾ ಭಾವನೆಗಳಿಗೆ ಕಿವಿಗೊಡುತ್ತಿದ್ದರು; ಕೆಲವೊಮ್ಮೆ ವಾಗ್ವಾದ ಮಾಡುತ್ತಿದ್ದರು. ಕೆಲವು ಸಲ ಬುದ್ಧಿ ಹೇಳುತ್ತಿದ್ದರು. ಪ್ರೀತಿ,ಪ್ರೇಮ, ಗಂಡ-ಹೆಂಡತಿ ಸಂಬಂಧದಲ್ಲಿ ತೀವ್ರವಾಗಿ ಚರ್ಚೆ ನಡೆಯುತ್ತಿತ್ತು. ನಮ್ಮಿಬ್ಬರ ವಿಚಾರಗಳು ಎಂದೂ ಮೇಳೈಸುತ್ತಿರಲಿಲ್ಲ. ಗಂಡು ಹೆಣ್ಣಿನ ಪ್ರೀತಿಯ ನಡುವೆ ಪ್ರಾಮಾಣಿಕತೆ ಇರಬೇಕು. ಒಬ್ಬರಿಗೊಬ್ಬರಲ್ಲಿ ವಿಶ್ವಾಸವಿರಬೇಕು. ಯಾವುದೇ ಕಾರಣಕ್ಕಾಗಲೀ, ಗಂಡು ತನ್ನನ್ನು ಪ್ರೇಮಿಸುವ ಹೆಣ್ಣಿಗೆ ಮೋಸಮಾಡಬಾರದು. ಅವನ ನಿಷ್ಠೆ ಅವಳಿಗೆ ಅತ್ಯಂತ ಜರೂರು. ತಾನು ಗಂಡು, ತನಗೆ ಸರ್ವತಂತ್ರ ಸ್ವಾತಂತ್ರ್ಯವಿದೆಯೆಂದು ಕಂಡ ಕಂಡ ಹೆಣ್ಣುಗಳ ಹಿಂದೆ ಹೋಗುವುದನ್ನು ಸುತರಾಂ ಒಪ್ಪುವಂಥವಳಲ್ಲ, ನಾನು. ಈ ವಿಚಾರದಲ್ಲಿ ನಮ್ಮಿಬ್ಬರಿಗೂ ಒಮ್ಮೆ ವಾಗ್ವಾದ ನಡೆಯಿತು. ರೇವತಿ ಕೇಳಿದರು-'ಕಲ್ಪನಾ, ನೀನು ಬಯಸುವುದಾದರೆ ಎಂಥ ಗಂಡನನ್ನು ಬಯಸುತ್ತೀ?"

'ಎಲ್ಲ ಹೆಣ್ಣುಗಳೂ ಬಯಸುವಂತೆ ನೋಡಲು ಲಕ್ಷಣವಾಗಿರಬೇಕು. ಸುಖಿ ಸಂಸಾರಕ್ಕೆ ಬೇಕಾದ ಆರ್ಥಿಕ ಭದ್ರತೆ ಇರಬೇಕು. ಇದರ ಜೊತೆಗೆ ಮುಖ್ಯವಾಗಿ ಕೈ ಹಿಡಿದವಳ ಜೊತೆ ನೈತಿಕ ನಿಷ್ಠೆ ಇರಬೇಕು. ನನ್ನ ವಿಚಾರಕ್ಕೆ ಬರುವುದಾದರೆ, ನನ್ನನ್ನು ಸ್ಪರ್ಶಿಸಿದ ಗಂಡು ಮತ್ತೊಂದು ಹೆಣ್ಣಿನ ಸ್ಪರ್ಶ ಸುಖಕ್ಕೆ ಹಾತೊರೆಯಬಾರದು. ಅವನು ಸಂಪೂರ್ಣವಾಗಿ ನನಗೇ ಮೀಸಲಾಗಿ ಉಳಿಯಬೇಕು. ಎಂದೆ. ನನ್ನ ಮಾತಿಗೆ ರೇವತಿ ನಗುತ್ತಾ "ಚೆನ್ನಾಗಿದೆ ಕಲ್ಪನಾ ನೀನು ಹೇಳುವುದು. ಗಂಡು ಯಾವಾಗಲೂ ಚಂಚಲ ಮನಸ್ಸಿನವನು.ಅವನಿಗೆ ಹಿಂದಿನಿಂದಲೂ ಪರಂಪರಾಗತವಾಗಿ ಸ್ವೇಚ್ಛೆಯಿಂದ ಬದುಕುವ ಸ್ವಾತಂತ್ರ್ಯ ಕೊಟ್ಟುಬಿಟ್ಟಿದ್ದಾರೆ. ಅಂಥಾದ್ದರಲ್ಲಿ ನೀನು, ಅವನ ನನಗೇ ಮೀಸಲಿರಬೇಕೆನ್ನುತ್ತೀ. ವನೇನು ಹೊಲಾನೇ, ಮನೇನೇ, ನಿನ್ನ ಹೆಸರಿಗೆ ರಿಜಿಸ್ಟರ್ ಮಾಡಿಸಿಕೊಂಡು ಕಂದಾಯ ಕಟ್ಟಿ, ಹಕ್ಕು ಸ್ಥಾಪಿಸಿಕೊಳ್ಳೋಕೆ?" ಎಂದು ಮರು ಪ್ರಶ್ನೆ ಹಾಕಿದರು.



ಅವರ ಸಮರ್ಥನೆಯಲ್ಲಿ ವ್ಯಂಗ್ಯವಿತ್ತೋ, ವಾಸ್ತವವಿತ್ತೋ ನನಗಂತೂ ತಿಳಿಯಲಿಲ್ಲ. ಪ್ರೀತಿಸಿದ ಹೆಣ್ಣಿಗೆ ಮೋಸಮಾಡಿ ಮತ್ತೊಂದು ಹೆಣ್ಣಿನ ದೇಹ - ಪಿಪಾಸೆಗೆ ಒಳಗಾಗುವುದೆಂದರೆ ಹೆಣ್ಣಿಗೆ ಮಾಡುವ ಘೋರ ಅಪಮಾನ ಎನ್ನುವ ನನ್ನ ಅಭಿಪ್ರಾಯವನ್ನಂತೂ ಅವರಿಗೆ ತಿಳಿಸಿದೆ.

ರೇವತಿ ಕಲ್ಯಾಣ್ ಇವರಿಬ್ಬರೂ ಮೊದಲೇ ಹೇಳಿದಂತೆ ನನಗೆ ನೈತಿಕ ಬಲದಂತಿದ್ದರು. ಅಲ್ಲದೇ ಅವರನ್ನು ಹೆಚ್ಚಾಗಿ ಪ್ರೀತಿಸಲು. ಗೌರವಿಸಲು, ಹಚ್ಚಿಕೊಳ್ಳಲು ಅವರಿಬ್ಬರ ನಡುವಿದ್ದ ಅನ್ಯೋನ್ಯ ಸಂಬಂಧ. ಅಚ್ಚಳಿಯದ ಪ್ರೀತಿ ವಿಶ್ವಾಸಗಳು ಒಬ್ಬರ ಮೇಲೆ ಒಬ್ಬರಿಗಿದ್ದ ನಂಬಿಕೆ. ಸಿನಿಮಾರಂಗದಲ್ಲಿ ಸಾಮಾನ್ಯವಾಗಿ ಒಂದು ಕೆಟ್ಟ ಅಭ್ಯಾಸವಿದೆ. ಯಾರಾದರೂ ಹೆಣ್ಣು-ಗಂಡು ಜೋಡಿಯಾಗಿ ಹಲವಾರು ಚಿತ್ರಗಳಲ್ಲಿ, ಗಂಡ-ಹೆಂಡತಿ, ಪ್ರೇಮಿಗಳಾಗಿ ಅಭಿನಯಿಸಿದರೆ, ಅವರಿಬ್ಬರ ನಡುವೆ ಅನೇಕ ಪ್ರಣಯ ಕತೆಗಳು ಹುಟ್ಟಿಕೊಳ್ಳುತ್ತದೆ. ಏನೇನೋ ಪುಕಾರುಗಳ ಮಹಾಪೂರವೇ ಆವರಿಸಿಬಿಡುತ್ತದೆ. ಹಾಗೆಯೇ ಕಲ್ಯಾಣ್ ಮತ್ತು ನನ್ನ ನಡುವೆ ಇಂತ ಸಂಬಂಧಗಳ ಸುದ್ದಿ ಸುಳಿದಾಡಿತು. ರೇವತಿಯವರ ಕಿವಿಗೂ ಬಿದ್ದಿರಬೇಕು. ಆದರೆ ರೇವತಿ ಅದನ್ನು ತಮಾಷೆಯಾಗಿ ಸ್ವೀಕರಿಸಿ ಪಕ್ಕಕ್ಕಿಟ್ಟರು. ನಾನು ಸಿಕ್ಕಾಗ ತಮಾಷೆಯಾಗಿ 'ಏನು ಕಲ್ಪನಾ ನಿನ್ನ ಪ್ರಿಯಕರನನ್ನು ನೋಡಲು ಬಂದೆಯಾ?"-ಎಂದು ರೇಗಿಸುತ್ತಿದ್ದರು. ಅವರಿಬ್ಬರೂ ಪ್ರೇಮ, ಕಾಮ ಸಂಬಂಧಕ್ಕಿಂತ ಭಿನ್ನವಾದ ಪವಿತ್ರ ಬಂಧನದಿಂದ ಬಂಧಿತರಾಗಿದ್ದರು. ಆದ್ದರಿಂದಲೇ ಅವರಿಬ್ಬರ ನಡುವೆ ಸಂದೇಹ, ಅನುಮಾನಗಳು ಸುಳಿಯುತ್ತಲೇ ಇರಲಿಲ್ಲ.

ನನಗೆ ನೋವಾದಾಗ, ದೈಹಿಕ ಅನಾರೋಗ್ಯ ಆವರಿಸಿದಾಗ ತಕ್ಷಣ ಅವರಿಗೆ ಕರೆಮಾಡಿ ಕರೆಯುತ್ತಿದ್ದೆ. ಅವರ ಉಪಸ್ಥಿತಿ, ಅವರ ಜೊತೆ ಮಾತುಕತೆ, ಅವರು ನೀಡುತ್ತಿದ್ದ ಪ್ರೋತ್ಸಾಹ, ತೋರುತ್ತಿದ್ದ ಪ್ರೀತಿ, ತುಂಬುತ್ತಿದ್ದ ಉತ್ಸಾಹ- ನನಗೆ ಸಂಜೀವಿನಿಯಾಗಿ ಕೆಲಸ ಮಾಡುತ್ತಿತ್ತು.

ಇಂಥ ಸ್ನೇಹಜೀವಿಗಳ ಒಡನಾಟ ಚಿತ್ರರಂಗದಲ್ಲಿ ದೊರೆತದ್ದು ನನ್ನ ಅದೃಷ್ಟ

"ಚಿನ್ನದ ಗೊಂಬೆ"ಗೇ ನನ್ನ ಪಯಣ ನಿಲ್ಲಲಿಲ್ಲ. ನನಗೆ ದೊರೆತ ಮತ್ತೊಬ್ಬ ಗಾಡ್ ಫಾದರ್ ಎಂದರೆ ಆರ್.ಎನ್. ನಾಗೇಂದ್ರ ರಾಯರು. ಆರ್.ಎನ್.ಆರ್ ಪ್ರೊಡಕ್ಷನ್‌ನ ಮಾಲೀಕರಾದ ನಾಗೇಂದ್ರ ರಾಯರು, ನನ್ನ "ಸಾಕುಮಗಳು" ಚಿತ್ರದ ಅಭಿನಯವನ್ನು ಮೆಚ್ಚಿಕೊಂಡಿದ್ದರು. ತಾವು ತಯಾರಿಸುವ ಚಿತ್ರಗಳಲ್ಲಿ ನನಗೆ ಅವಕಾಶಗಳನ್ನು ಖಂಡಿತವಾಗಿಯೂ ಕೊಡುವುದಾಗಿ ಭರವಸೆ ಇತ್ತಿದ್ದರು. ಅಂತಯೇ "ಪತಿಯೇ ದೈವ" ಚಿತ್ರಕ್ಕೆ ನನ್ನನ್ನು ನಾಯಕಿ ಪಾತ್ರಕ್ಕೆ ಆಹ್ವಾನಿಸಿದರು. ಅದರಿಂದ ನನ್ನ ಆತ್ಮವಿಶ್ವಾಸ ಹೆಚ್ಚಿತು ಅವರ ನಿರ್ದೇಶನ, ಮಾರ್ಗದರ್ಶನದಲ್ಲಿ ಯುನಿಟ್ ಸದಸ್ಯರೆಲ್ಲರ ಸ್ನೇಹ ವಲಯದಲ್ಲಿ ಕೆಲಸ ಮಾಡುತ್ತಿದ್ದುದ್ದೇ ಒಂದು ವಿಶೇಷ ಅನುಭವವಾಗಿತ್ತು. ಹೊತ್ತು ಹೋಗುವುದೇ ತಳಿಯುತ್ತಿರಲಿಲ್ಲ. ಹಿರಿಯರಾದ ನಾಗೇಂದ್ರರಾಯರು ನಮ್ಮನ್ನೆಲ್ಲ ತಮ್ಮ ಕುಟುಂಬದ ಸದಸ್ಯರಷ್ಟು ಸಲುಗೆ, ಪ್ರೀತಿಗಳಿಂದ ನಡೆಸಿಕೊಳ್ಳುತ್ತಿದ್ದರು. ಇದೇ ಸಂಸ್ಥೆಯ ಎಲ್ಲ ಚಿತ್ರಗಳಲ್ಲಿ ನನಗೆ ನಾಯಕಿ ಪಾತ್ರವೇ ಖಚಿತವಾಗಿತ್ತು. ನಾನು ಪ್ರತಿಯೊಂದು ಚಿತ್ರದ ಕಥೆಯನ್ನು, ಒಟ್ಟು ಧ್ವನಿಯನ್ನು ಗ್ರಹಿಸಿ ನಿರ್ವಂಚನೆಯಿಂದ, ಪಾತ್ರಕ್ಕೆ ಅನ್ಯಾಯವಾಗದಂತೆ ಪಾತ್ರದೊಂದಿಗೆ ಅನನ್ಯತೆಯ ಭಾವದಿಂದ ಅಭಿನಯಿಸುತ್ತಿದ್ದೆ. ಇಷ್ಟೆಲ್ಲಾ ಚಿತ್ರಗಳೂ ಒಂದಷ್ಟು ಚಪ್ಪಾಳೆ ಬಿಟ್ಟರೆ ಮತ್ತೇನನ್ನೂ ತಂದುಕೊಡಲಿಲ್ಲ. ಚಿತ್ರಗಳಿಗೆ ಆರ್ಥಿಕ ಲಾಭವೂ ಬರಲಿಲ್ಲ. ನನ್ನಲ್ಲಿ ಎಲ್ಲಿಯೋ ಅಪರಾಧಿ ಭಾವ ಕಾಡುತ್ತಿತ್ತು. ನನ್ನ ಅಭಿನಯದ ಅಸಮರ್ಥತೆಯೇನಾದರೂ ಇವುಗಳ ಯಶಸ್ಸಿಗೆ ಅಡ್ಡಿಯೇನೋ ಅಂದು ಕೊಳ್ಳುತ್ತಿದ್ದೆ. ನನಗೆ ಸವಾಲಾಗಬಹುದಾದ ಪಾತ್ರಗಳ ಅನ್ವೇಷಣೆ ನನ್ನದಾಗಿತ್ತು.

ಈ ನನ್ನ ಅನ್ವೇಷಣೆಯ ಮೊದಲ ಮೆಟ್ಟಿಲಾಗಿ "ನಾಂದಿ" ಚಿತ್ರ ನನ್ನ ಪಾಲಿಗೆ ಸಿಕ್ಕಿತು. ಮಹಾನಟ ಎನಿಸಿಕೊಳ್ಳುತ್ತಿದ್ದ ರಾಜ್‌ಕುಮಾರ್ ರವರೊಂದಿಗೆ ನಟಿಸುವ ಸುಯೋಗ ನನ್ನದಾಗಿದ್ದಕ್ಕೆ ನನ್ನ ಸಂತೋಷಕ್ಕೆ ಎಣೆಯಿಲ್ಲದಂತಾಯಿತು. ಅವರ ಮೊದಲ ಹೆಂಡತಿಯಾಗಿ ನಟಿಸಿ , ಹೆಣ್ಣಿನ ಎಲ್ಲ ಅವಸ್ಥಾಂತರಗಳಲ್ಲಿನ ವಿಭಿನ್ನ ಭಾವಸ್ಥಿತಿಗಳಲ್ಲಿ ಸಹಜವಾಗಿ ನಟಿಸುವ ಪ್ರಯತ್ನ ನನ್ನದಾಗಿತ್ತು. ಅಂಗವೈಕಲ್ಯದಿಂದುಂಟಾಗುವ ಅಸಹಾಯಕತೆ ಅದರ ಬಗ್ಗೆ ಸಮಾಜದ ನಿಲುವುಗಳು-ಅವರ ಅಸಹಾಯಕತೆಯ ಪರಿಹಾರಕ್ಕಾಗಿ ಕೈ ಗೊಳ್ಳಬೇಕಾದ ನಿರ್ಧಾರಗಳು ಇತ್ಯಾದಿಗಳ ಮೂಲಕ ಒಂದು ಸಾಮಾಜಿಕ ಸಂದೇಶವನ್ನು ನೀಡುವ ಚಿತ್ರ ಇದಾಗಿದೆ. ಈ ಚಿತ್ರಕ್ಕೆ ಸಾಕಷ್ಟು ಪ್ರಶಸ್ತಿ, ಪುರಸ್ಕಾರಗಳೂ ದೊರೆಯಿತು. ಪ್ರಚಂಡ ಯಶಸ್ಸನ್ನು ಪಡೆಯಿತು.



ಚಿತ್ರಗಳಲ್ಲಿ ಅಭಿನಯಿಸಲು ಸಾಕಷ್ಟು ಬೇಡಿಕೆಗಳಿದ್ದುದಾರೂ ನನ್ನನು ಉತ್ತುಂಗಕ್ಕೇರಿಸುವ ಮಹತ್ವದ ಚಿತ್ರಗಳಾಗಲೀ, ನನಗೆ ಸವಾಲೆನಿಸುವ ಪಾತ್ರಗಳಾಗಲೀ ನನ್ನ ಪಾಲಿಗೆ ಇನ್ನೂ ದೊರೆತಿಲ್ಲ. ನಮ್ಮಲ್ಲಿ ಪ್ರತಿಭೆ, ಸಾಮರ್ಥ್ಯಗಳಿದ್ದರೆ ಸಾಲದು, ಅದನ್ನು ಹುಡುಕಿ ತೆಗೆದು ಪಾಲಿಷ್ ಮಾಡಿ, ಮೌಲ್ಯವನ್ನು ಗುರುತಿಸುವ ಪರಿಸರದಲ್ಲಿ ಇರಿಸಬೇಕಾಗುತ್ತದೆ. ಪ್ರತಿಭವಂತ ನಿರ್ದೇಶಕರಿದ್ದರೂ, ಕಲಾವಿದರೂ ಇದ್ದರೂ. ಆದರೂ ತೆರೆಗೆ ಬರುವ ಎಲ್ಲ ಚಿತ್ರಗಳಿಗೂ ಯಶಸ್ಸಿನ ಭಾಗ್ಯ ಲಭಿಸುವುದಿಲ್ಲ. ಚಿತ್ರಕ್ಕೆ ಯಶಸ್ಸಿಲ್ಲವೆಂದ ಮೇಲೆ ಚಿತ್ರದಲ್ಲಿನ ನಟನಟಿಯರಿಗೆ ಹೇಗೆ ಸಾಧ್ಯ?

ಸಣ್ಣ ಪುಟ್ಟ ಪಾತ್ರಗಳಲ್ಲಿ ಹಲವಾರು ಚಿತ್ರಗಳಲ್ಲಿ ಕಾಣಿಸಿಕೊಂಡೆ. ಹೊಟ್ಟೆಪಾಡಿಗೆ ವೃತ್ತಿ ರೂಪದಲ್ಲಿ ಚಿತ್ರಗಳಲ್ಲಿ ನಟಿಸುತ್ತಿದ್ದೇನೇ ಹೊರತಾಗಿ, ಸಂಪೂರ್ಣವಾಗಿ ನನ್ನ ಸಾಮರ್ಥ್ಯವನ್ನು ಧಾರೆಯೆರೆಯುವಂತಹ ಪಾತ್ರಗಳು ನನಗಿನ್ನೂ ಮರೀಚಿಕೆಯೇ!

ನನಗನ್ನಿಸಿತ್ತಿತ್ತು. ದೇವರು ಕಾಯಿಸುತ್ತಾನೆಯೇ ಹೊರತು ಕತ್ತಲು ತುಂಬುವುದಿಲ್ಲ. ನನ್ನ ನಂಬಿಕೆಗೆ ಗರಿ ಮೂಡಿದಂತೆ ಬಿ.ಆರ್.ಪಂತುಲು ಗರಡಿಯಲ್ಲಿ ಪಳಗಿದ್ದ ಕಣಗಲ್ ಪುಟ್ಟಣ್ಣರವರಿಂದ "ಬೆಳ್ಳಿಮೋಡ" ಚಿತ್ರದಲ್ಲಿ ನಾಯಕಿ ಪಾತ್ರಕ್ಕೆ ಆಹ್ವಾನ ಬಂತು. "ಸಾಕುಮಗಳು" ಸಿನಿಮಾದ ಸಂದರ್ಭದಲ್ಲಿಯೇ ಅವರ ಪರಿಚಯವಾಗಿತ್ತು. ಮತ್ತು ಸ್ನೇಹವೂ ಇತ್ತು. ಬಹುಶಃ ಅವರಿಗೆ ನನ್ನ ಅಭಿನಯ ಮೆಚ್ಚುಗೆಯಾಗಿರಬೇಕು. "ಸಾಕುಮಗಳು" ಸಂದರ್ಭದಲ್ಲಿಯೇ ನಿನಗೊಂದು ಅದ್ಭುತ ನಟನೆಯನ್ನು ಕೋರುವ ಮಹತ್ವದ ಪಾತ್ರ ನೀಡುತ್ತೇನೆಂದು ಭರವಸೆ ನೀಡಿದ್ದರು. ಈಗ ಆ ಮಾತನ್ನು ಉಳಿಸಿಕೊಂಡಿದ್ದಾರೆ. ಪುಟ್ಟಣ್ಣನವರು ಸಾಹಿತ್ಯ ಪ್ರಿಯರು. ಕನ್ನಡದಲ್ಲಿನ ಒಳ್ಳೊಳ್ಳೆ ಕಾದಂಬರಿಗಳನ್ನು ಚಲನಚಿತ್ರಗಳಾಗಿ ಮಾಡಬೇಕೆಂಬ ಹೆಬ್ಬಯಕೆ ಅವರದಾಗಿತ್ತು ನಾನು ಸಿನಿಮಾ ಪ್ರವೇಶಿಸಿದ ದಶಕದಲ್ಲಿಯೂ ಕನ್ನಡದ ಶ್ರೇಷ್ಠ ಕಾದಂಬರಿಗಳು ಚಲನಚಿತ್ರಗಳಾಗಿ ಅತ್ಯಂತ ಜನಪ್ರಿಯತೆ ಗಳಿಸುತ್ತಿದ್ದವು. "ಧರ್ಮದೇವತೆ" "ಕರುಣೆಯೇ ಕುಟುಂಬದ ಕಣ್ಣು" "ಕುಲವಧು" "ಚಂದವಳ್ಳಿಯ ತೋಟ" ಇತ್ಯಾದಿ ಜನಪ್ರಿಯ ಕಾದಂಬರಿಗಳೆಲ್ಲ ಚಲನಚಿತ್ರಗಳಾಗಿದ್ದವು. ಪುಟ್ಟಣ್ಣ, ಈ ಪರಂಪರೆಯಲ್ಲಿ ಹಿಂದೆ ಬೀಳಲಿಲ್ಲ. ಪುರುಷರು ರಚಿಸಿದ ಕಾದಂಬರಿಗಳೇ

ಹೆಚ್ಚಾಗಿ ಸಿನಿಮಾದಲ್ಲಿ ಬಳಕೆಯಾಗಿದ್ದವು. ಆದರೆ ಪುಟ್ಟಣ್ಣನವರು ಕಾದಂಬರಿ ಆಯ್ಕೆಯಲ್ಲೂ ವಿಶಿಷ್ಟತೆ ತೋರಿದರು. "ಸ್ತ್ರೀ ಕೇಂದ್ರಿತ" ಚಲನ ಚಿತ್ರ "ಮಿಸ್ ಲೀಲಾವತಿ" ಈಗಾಗಲೇ ಬಂದಿತ್ತಾರೂ, ಮಹಿಳೆಯರೇ ಬರೆದ ಕಾದಂಬರಿಗಳನ್ನು ತಮ್ಮ ನಿರ್ದೇಶನಕ್ಕೆ ಆಯ್ದುಕೊಂಡದ್ದು ಮತ್ತೊಂದು ವಿಶೇಷ. ಆ ಕಾಲಕ್ಕೆ ತ್ರಿವೇಣಿ ಅತ್ಯಂತ ಜನಪ್ರಿಯ ಲೇಖಕಿಯಾಗಿ ಗುರುತಿಸಿಕೊಂಡಿದ್ದರು. ಅವರ ಕೃತಿಗಳಲ್ಲಿ ಮೊದಲಿಗೆ "ಬೆಳ್ಳಿ ಮೋಡ" ಕಾದಂಬರಿಯ ಕತೆಯನ್ನು ಚಿತ್ರಕ್ಕಾಗಿ ಆರಿಸಿಕೊಂಡರು. ಅದಕ್ಕೆ ನನ್ನನ್ನೇ ನಾಯಕಿ ಪಾತ್ರಕ್ಕೆ ಆಹ್ವಾನಿಸಿದರು. ನನಗಂತೂ ಈ ಚಿತ್ರದ ಕತೆಯನ್ನು ಕೇಳಿದ್ದೇ, ಗರಿಗೆದರಿ ಹಾರಾಡಿದೆ. ಅದರಲ್ಲೂ "ಕಲ್ಪನಾ ಈ ಕತೆಯನ್ನು ನಿನಗಾಗಿಯೇ ಆರಿಸಿಕೊಂಡಿದ್ದೇನೆ."–ಎಂದು ತಿಳಿಸಿದಾಗಂತೂ ನನ್ನ ಮನಸ್ಸಿನ ಭಾವನೆಗಳನ್ನು ಮಾತುಗಳಲ್ಲಿ ಹಿಡಿದಿಡಲಾಗದ ಆನಂದದ ತೂರ್ಯಾವಸ್ಥೆಯೇ ಅದಾಗಿತ್ತು. ನನ್ನ ಬಗ್ಗೆ ಅವರಿಗೆ ಅತಿಯಾದ ಸ್ನೇಹ. ಒಪ್ಪಿದ್ದು ಒಗಟಿನಂತೆ ಕಂಡರೂ, ಇಂಥವಳು ಸೊಸೆಯಾಗಿ ಬಂದರೆ ತಮಗೇ ಲಾಭವಿದೆ ಎನ್ನುವ ಸತ್ಯದ ಅರಿವು ತಮಗಾದಂತೆ ಅವನಿಗೂ ಆಗಿರಬೇಕು ಎಂಬ ತರ್ಕದ ಮೂಲಕ ಸಮಾಧಾನವಾಗುತ್ತದೆ. ಅಳಿಯನಾಗಿ ಪಡೆಯಬೇಕಾದ ಎಲ್ಲ ಸವಲತ್ತುಗಳನ್ನು ಅನುಭವಿಸಿ, ಅಮೇರಿಕಾದಲ್ಲಿದ್ದು ಓದುಮುಗಿಸಿ ಬಂದ ಮೇಲೆ, ವಿವಾಹವನ್ನು ನಿರಾಕರಿಸುವುದು ಯಾವುದೇ ರೀತಿಯಿಂದ ಸಮರ್ಥನೀಯವಲ್ಲ ಆದರೂ ನಾಯಕ ನಿರಾಕರಿಸುತ್ತಾನೆ. ಕಾರಣ ಆ ಮನೆಗೆ ಒಬ್ಬ ಪುಟ್ಟ ವಾರಸುದಾರ, ಆಸ್ತಿಯ ಹಕ್ಕುದಾರ ಆಗಮಿಸಿದ್ದಾನೆ. ಇದೆಂಥಾ ಸ್ವಾರ್ಥ! ಅಳಿಯನಾಗಿ ಎಲ್ಲ ಮನ್ನಣೆ ಸಾಕಷ್ಟು ಆಸ್ತಿ ಪಾಸ್ತಿಯೂ ಸಿಗುವ ಅವಕಾಶಗಳಿದ್ದರೂ ಸಂಪೂರ್ಣ ಒಡೆತನಕ್ಕೆ ಅವಕಾಶವಾಗುವುದಿಲ್ಲ – ಎಂಬ ಒಂದು ಸಣ್ಣ ನೆಪ, ತಾನು ಪ್ರೀತಿಸಿದ, ತನ್ನನ್ನು ಪ್ರೀತಿಸಿದ ಹೆಣ್ಣನ್ನು ಸೌಜನ್ಯದಿಂದಲೇ ತಿರಸ್ಕರಿಸುವ ಆ ಪುರುಷ ಮನಸ್ಸಿನ ಕೀಳ್‌ತನಕ್ಕೆ, ನಾಯಕಿಯ ಮನಸ್ಸು ಆಘಾತಗೊಂಡರೂ, ಸಂಯಮದಿಂದಲೇ ಸಮಸ್ಯೆಯನ್ನು ಮುಖಾಮುಖಿಯಾಗಿಸಿಕೊಂಡು ನಿರ್ವಹಿಸಿದ ರೀತಿ ನಿಜವಾಗಿಯೂ ನನ್ನನ್ನು ಮುಗ್ಧಳನ್ನಾಗಿಸಿತ್ತು. ಒಂದು ರೀತಿಯಿಂದ ಸ್ವಭಾವತಃ ನಾನು ಅದೇ ಬಗೆಯವಳಾಗಿದ್ದೆ. ಎಂಥ ಆಘಾತಕಾರಿಯಾದ ಸನ್ನಿವೇಶಗಳು ಎದುರಾದರೂ ನಾನು ಹೊರಗೆ ತೋರಿಸಿಕೊಳ್ಳದೇ, ಸ್ಫೋಟಿಸದೆ ನಗುನಗುತ್ತಲೇ ಪ್ರತಿಕ್ರಿಯಿಸುತ್ತಿದ್ದೆ. ಹಾಗೆಂದು ವಿನಾಕಾರಣ ಅದೂ ಇದೂ ಮಾತಾಡಿದರೆ, ಇಲ್ಲ ಸಲ್ಲದನ್ನು ಆರೋಪಿಸಿದರೆ, ನಕ್ಕು ಆಷಾಢಭೂತಿತನ ತೋರಿಸುತ್ತಿರಲಿಲ್ಲ.

ಯಾರಿಗೇ ಅನ್ಯಾಯವಾಗುತ್ತಿದೆ ಎಂಬ ಭಾವ ಬಂದರೆ, ನ್ಯಾಯದ ಪರ ನಿಂತು ನಿಷ್ಠುರವಾಗಿ ಹೇಳಿಬಿಡುತ್ತಿದ್ದೆ. ಸಿನಿಮಾ ಉದ್ದಿಮೆಯಲ್ಲಿ, ಅನೇಕ ಲೋಪ ದೋಷಗಳಿದ್ದವು. ಕೆಲವರಿಗೆ ಅನ್ಯಾಯವಾದದ್ದೂ ಉಂಟು. ಅಂತಹಾ ಸಂದರ್ಭದಲ್ಲಿ ನನಗೆ ಸರಿ ಎಂದು ತೋರಿದ್ದನ್ನು ತಿಳಿಸಿ ಹೇಳುತ್ತಿದ್ದೆ. ಸುಧಾರಣೆ ಸಾಧ್ಯವಾಗಬಹುದಾದ ರೀತಿಗಳ ಬಗ್ಗೆ ಹೇಳಿಕೆಗಳನ್ನು ಕೊಡುತ್ತಿದ್ದೆ. ಇಂತಹ ಸುಧಾರಣೆಗೆ ಅವಕಾಶವೀಯದವರನ್ನು ಬಹಿರಂಗವಾಗಿಯೇ ಖಂಡಿಸುತ್ತಿದ್ದೆ. ಇದು ಅನೇಕರಿಗೆ ಸಹ್ಯವಾಗುತ್ತಿರಲಿಲ್ಲ. ಗುಂಪು ಗಟ್ಟಿ ನನ್ನ ವಿಚಾರಗಳನ್ನು ಹತ್ತಿಕ್ಕಲು, ನನ್ನ ವಾಕ್ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲು ಪ್ರಯತ್ನವೂ ನಡೆಯಿತು. ನನ್ನ ಅನುಭವದಲ್ಲಿ ನೀವು ಅಂದುಕೊಂಡಂತೆ ನಮಗೆ ಯಾವ ಸ್ವಾತಂತ್ರ್ಯವೂ ಇಲ್ಲ ನಮ್ಮ ನಮ್ಮ ಸ್ವಾತಂತ್ರ್ಯವೂ ಎಲ್ಲಿ, ಹೇಗೆ, ಯಾವ ಸಂದರ್ಭ, ಯಾರ ಪ್ರೋತ್ಸಾಹದ ಪರಿಸರದಲ್ಲಿ ಎಂದೆಲ್ಲ ನಿರ್ಧರಿತವಾಗುತ್ತದೆ; ನಿಯಂತ್ರಿಸಲಾಗುತ್ತದೆ. ಪಟ್ಟಭದ್ರರ ಖುಷಾಮುದಿ ಮಾಡುತ್ತಾ, ನಾಟಕ ಮಾಡುತ್ತಾ, ಭಟ್ಟಂಗಿಗಳಾಗಿ



ವ್ಯವಹರಿಸುತ್ತಾ ಅವರ ಮರ್ಜಿಯಂತೆ ಮುಂದುವರೆದರೆ, ಅವರೆಲ್ಲರಿಗೆ ಅವಕಾಶಗಳೂ ಸಿಗುತ್ತವೆ. ಪುರಸ್ಕಾರಗಳೂ ಸಿಗುತ್ತವೆ. ಇಂತಹ ರೀತಿಯಲ್ಲಿ ನಡೆದುಕೊಳ್ಳಲಾಗದ ಪುರುಷರಿಗೂ ಸಂಘರ್ಷ ತಪ್ಪಿದ್ದಲ್ಲವೆಂದಾದ ಮೇಲೆ ಇನ್ನು ನನ್ನಂತಹ ಹೆಂಗಸರ ಸ್ವಾತಂತ್ರ್ಯ, ಮುಕ್ತ ಅಭಿಪ್ರಾಯಗಳನ್ನು ಸ್ವಾಗತಿಸುವ ಮನಸ್ಸಾದರೂ ಎಲ್ಲಿರುತ್ತೆ ಈ ಸಮಾಜಕ್ಕೆ? ಹೀಗಿರುವಾಗ, ನನ್ನ ನಟನೆಯನ್ನು ಪ್ರತಿಭೆಯನ್ನು ಮೆಚ್ಚಿಕೊಳ್ಳುವ ಅಭಿಮಾನಿ ಬಳಗವಿದ್ದರೂ, ಅಹಂಕಾರಿ, ಸ್ವಪ್ರತಿಷ್ಠೆ

ಇರುವವಳು. ದುರಭಿಮಾನಿ – ದುಡುಕಿನವಳು – ಎಂದೆಲ್ಲಾ ಬಿರುದುಗಳೂ ಬಂದಿದೆ. ಆದರೆ ಇವೆಲ್ಲವನ್ನೂ ಸಹಿಸಿಕೊಂಡಿದ್ದೇನೆ. ಸಹಿಸಿಕೊಳ್ಳುವುದನ್ನು ನಾನು ಅಭಿನಯಿಸಿದ ಸಿನಿಮಾಗಳ ಮೂಲಕ ಕಲಿತಿದ್ದೇನೆ.

ನಾನು ಮಾಡುತ್ತಿದ್ದುದು ಅಭಿನಯವೇ ಆದರೂ ಆ ಪಾತ್ರಗಳ ನೋವು, ಸಂಕಟ, ಕಷ್ಟಗಳು, ಸಮಸ್ಯೆಗಳು ನನ್ನದೇ ಎನ್ನುವಷ್ಟರ ಮಟ್ಟಿಗೆ ಪಾತ್ರಗಳಲ್ಲಿ ಬೇರಿಳಿಸುತ್ತಿದ್ದೆ, ಅವುಗಳಲ್ಲಿನ ಕೆಲವು ಪ್ರಸಂಗಗಳು ನನ್ನ ಖಾಸಗಿ ಪ್ರಸಂಗಗಳೂ ಆಗಿದ್ದವು. ಪ್ರೀತಿಗೆ ಹಂಬಲಿಸುವ ತಹತಹಿಸುವ ಮನಸ್ಸು ನಿಜವಾಗಿಯೂ ನನ್ನದೇ ವಾಸ್ತವ ಬದುಕಿನಿಂದ ಬಂದದ್ದಾಗಿತ್ತು. ನನಗೆ ನಿಜಜೀವನದಲ್ಲಿಯೂ ನೆಮ್ಮದಿ ದಕ್ಕಲಿಲ್ಲ. ನಾನು ಪ್ರೀತಿಸಿದವರೂ ನನ್ನನ್ನು ಅರ್ಥಮಾಡಿಕೊಳ್ಳಲಿಲ್ಲ. ಪ್ರೀತಿಯೊಂದು 'ನನ್ನ ಬಾಳಿನ ಮರೀಚಿಕೆಯೆಂಬುದಂತೂ ಸತ್ಯ ಸತ್ಯ. ಇದೇ ನನಗೆ ನನ್ನ ಸಿನಿಮಾಗಳಲ್ಲಿ ಅಭಿನಯಿಸಬೇಕಾಗಿ ಬಂದುದು ಒಂದು ಬಗೆಯ ವಿಪರ್ಯಾಸ! 'ಶರಪಂಜರ' ಸಿನಿಮಾದಲ್ಲಿನ ಅಭಿನಯವಂತೂ ನನಗೆ 'ನೈಟ್‌ಮೇರ್' ಆಗಿ ಕಾಡತೊಡಗಿತು. ಜೀವನದಲ್ಲಿ ಪ್ರಾಯದ ಯಾವುದೋ ಹಂತದಲ್ಲಿ, ಒಂದು ಕ್ಷಣದಲ್ಲಿ ನಡೆದ ಘಟನೆ ಸುಪ್ತ ಪ್ರಜ್ಞೆಯಲ್ಲಿ ಅವಿತಿದ್ದುದು. ದಾಂಪತ್ಯದ ಸುಖ ಸಂತೋಷ, ಸಂಭ್ರಮಗಳ ತೂರ್ಯಾವಸ್ಥೆಯಲ್ಲಿದ್ದಾಗ, ಯಾವುದೋ ಒಂದು ಕ್ಷಣದ ಬಾಹ್ಯ ಪ್ರೇರಣೆ. ಪ್ರಚೋದನೆಯಿಂದ ಮರುಕಳಿಸಿ ವ್ಯಕ್ತಿತ್ವವನ್ನು ಛಿದ್ರವಾಗಿಸಿ, ಉನ್ಮಾದಕ್ಕೆ ಒಳಗಾಗಿಸಿ ಮಾನಸಿಕ ಅಸ್ವಸ್ಥತೆಯ ದುರಂತಕ್ಕೆ ದೂಡುವ ಸನ್ನಿವೇಶವಂತೂ ನನ್ನನ್ನು ದಿಗ್ಭ್ರಾಂತಿಯಿಂದ ಹೆಪ್ಪು ಗಟ್ಟಿಸಿ ಬಿಟ್ಟಿತು. ಕೈ ಹಿಡಿದ ಗಂಡನನ್ನು ಬಿಟ್ಟು, ತಾನು ತನ್ನದೆನ್ನುವ ಎಲ್ಲವನ್ನು ಅವನಿಗೆ ಒಪ್ಪಿಸಿ, ಅವನ ಪ್ರೀತಿಯ ನೆರಳಲ್ಲಿ ಬದುಕಬೇಕೆನ್ನುವ ಭವ್ಯ ಭವಿಷ್ಯದ ಕನಸಿನ ಮೂಟೆಯೊಂದಿಗೆ ಗಂಡನ ಮನೆಯ ಹೊಸ್ತಿಲು ತುಳಿದು ಒಳಗೆ ಬರುವ ಹೆಣ್ಣಿನ ಬಗೆಗೆ ಪ್ರೀತಿ, ಆದರಗಳು ವಂಚಿತವಾದಾಗ, ಆ ಅಸಹಾಯಕ ಹೆಣ್ಣಿನ ಪಾಡೇನು?

ದೈಹಿಕ, ಮಾನಸಿಕ ಅಸ್ವಸ್ಥತೆಗಳು ಹೇಳಿ ಕೇಳಿ ಬರುವುದಿಲ್ಲ. ಗಂಡಾಗಲಿ, ಹೆಣ್ಣಾಗಲಿ, ಇವುಗಳಿಗೆ ಆಕಸ್ಮಿಕವಾಗಿ ಗುರಿಯಾಗುವುದೂ ಸಹಜ. ಆದರೆ ಹೆಣ್ಣು ಮಾನಸಿಕ ದೌರ್ಬಲ್ಯಕ್ಕೆ, ಅಸ್ವಸ್ಥತೆಗೆ ಒಳಗಾದರೆ ಅಂಥವಳನ್ನು 'ಹುಚ್ಚಿ' ಎಂದು ಹಣೆಪಟ್ಟಿಕಟ್ಟಿ, ಇನ್ನು ಮುಂದೆ ಅವಳಿಗೆ ಬದುಕೇ ಇಲ್ಲವೆಂಬ ವಾತಾವರಣ ಸೃಷ್ಟಿಸುವುದು ಯಾವ ನ್ಯಾಯ? ಸ್ವಸ್ಥಳಾಗಿ ಹಿಂತಿರುಗಿದರೂ ಸಮಾಜದ, ಕುಟುಂಬದವರ, ಕಡೆಗೆ ಕೈ ಹಿಡಿದವನ ಕಣ್ಣಲ್ಲಿ ಹುಚ್ಚಿಯಾಗಿಯೇ

ಪ್ರತಿಫಲಿಸುವುದು, ಅವಳನ್ನು, ಅವಳ ಚರ್ಯೆಗಳನ್ನು ಗುಮಾನಿಯಿಂದ ನೋಡುವುದು; ಪ್ರತಿಯೊಂದು ಕ್ರಿಯೆಯನ್ನೂ ಹುಚ್ಚರ ಕೆಲಸವೆಂದು ಅರ್ಥೈಸುವುದು. ಪ್ರತಿಯೊಂದನ್ನು ಅತಿರೇಕಿಸಿ ವ್ಯಾಖ್ಯಾನಿಸುವುದೂ – ಇವೆಲ್ಲವೂ ಎಂಥ ಕ್ರೌರ್ಯದ ಸಂಗತಿಗಳು! ಎಲ್ಲವೂ ಸಂಸಾರದಲ್ಲಿ ಸರಿಯಿದ್ದಾಗ, ಹೆಂಡತಿಯನ್ನೂ ರನ್ನೆ, ಚಿನ್ನೆ ಎಂದು ಕೊಂಡಾಡುವಾಗ, ತನ್ನನ್ನು ಅತಿಯಾಗಿ ಬಯಸಿ ಮೇಲೆ ಬಿದ್ದು ಬರುವ ಹೆಣ್ಣುಗಳ ಬಗ್ಗೆ 'ಮೇಲೆ ಬಿದ್ದ ಸೂಳೆ ಮೂರು ಕಾಸಿಗೂ ಬೇಡ' ಎಂದು ತಿರಸ್ಕಾರ ಸೂಚಿಸುವಾಗ ಆಂತರ್ಯದಲ್ಲಿ ಅಪಾರವಾಗಿ ಇರಿಸಿಕೊಂಡಿದ್ದ ಪ್ರೀತಿಯೂ, ಹೆಂಡತಿ 'ಹುಚ್ಚಿ' ಎಂದು ತಿಳಿಯುತ್ತಿದ್ದಂತೆಯೇ ಬೇಡದ ಸೂಳೆಯನ್ನೂ ಬರಸೆಳೆದುಕೊಳ್ಳುವ ಪುರುಷನಿಗೆ ಯಾವ ಮೌಲ್ಯಗಳಿರಲು ಸಾಧ್ಯ? ಮಾನವೀಯತೆ ಉಳಿಸಿಕೊಳ್ಳಲು ಸಾಧ್ಯ? ಒಮ್ಮೆ ಹುಚ್ಚಿಯಾದವಳಿಗೆ ಬದುಕುವ ಹಕ್ಕಿಲ್ಲವೇ? ತಾನು ಹುಚ್ಚಿಯಾಗಿದ್ದಳೆಂಬ ಗತ ಸ್ಮೃತಿಯನ್ನೂ ಮರೆಸುವ ರೀತಿಯಲ್ಲಿ ಪ್ರೀತಿ, ಔದಾರ್ಯ, ಸ್ನೇಹ ಸಹಾನುಭೂತಿಯನ್ನು ತೋರುತ್ತಾ, ಆತ್ಮ ಸ್ಥೈರ್ಯ, ಭರವಸೆಗಳನ್ನು ತುಂಬುತ್ತ ಎಲ್ಲರಂತೆ ಸಹಜವಾಗಿ, ಮಾಮೂಲಿಯಾಗಿ ಬದುಕುವ ಅವಕಾಶವನ್ನೇಕೆ ಕಿತ್ತುಕೊಳ್ಳುತ್ತದೇ. ಈ ಸಮಾಜ? ಹೆತ್ತ ಮಕ್ಕಳಿಂದ, ಪ್ರೀತಿಸುವ ಗಂಡನಿಂದ, ಆದರಾಭಿಮಾನಗಳಿಂದ ನೋಡುವ ಬಂಧುಗಳಿಂದ ದೂರವಾಗಿಸುವ, ಅಸ್ಪೃಶ್ಯಳಾಗಿಸುವ ಸಮಾಜದ ಕ್ರೌರ್ಯಕ್ಕೆ, ಮಾಡದ ಯಾವುದೇ ಅಪರಾಧಕ್ಕೆ ಮತ್ತೆ ಹುಚ್ಚಿಯಾಗಿಸುವ ಶಿಕ್ಷೆ ನೀಡುವುದು ಯಾವ ನ್ಯಾಯ? – ಇಂಥ ಎಲ್ಲಾ ಪ್ರಶ್ನೆಗಳು ನನ್ನಲ್ಲಿ ಪದೇ ಪದೇ ಪುಟಿದೇಳುತ್ತಿದ್ದವು.

ನಾನು ಅಭಿನಯಿಸುತ್ತಿದ್ದ ಒಂದೊಂದು ಕ್ಷಣವನ್ನೂ ನಾನು ಕಾವೇರಿಯಾಗಿ ಅನುಭವಿಸಿದೆನೇ ಹೊರತಾಗಿ ಕಲ್ಪನಾಳಲ್ಲಿ. ಅಲ್ಲ ಆ ಪಾತ್ರದಿಂದ ಆಚೆ ಬರುವುದು ನನಗೆ ಸಾಧ್ಯವೇ ಆಗುತ್ತಿರಲಿಲ್ಲ. ಭಾವೋದ್ವಿಗ್ನತೆಯಿಂದ ತತ್ತರಿಸಿ ಬಳಲಿ ಹೋಗುತ್ತಿದ್ದೆ. ಕಾವೇರಿಯ ಪರಕಾಯ ಪ್ರವೇಶ ಮಾಡಿದ್ದ ನನ್ನನ್ನು ಹೊರಗೆ ಸೆಳೆದುಕೊಳ್ಳಲು ನನಗೆ ಅತೀವ ಕಷ್ಟವಾಗುತ್ತಿತ್ತು. ನನ್ನ ಷಾಟ್ಸ್ ಮುಗಿದ ಮೇಲೆ ದೀರ್ಘನಿಟ್ಟುಸಿರಿನೊಂದಿಗೆ ಕಷ್ಟ ಪಟ್ಟು ಕಾಲೆಳೆದುಕೊಂಡು ಬಂದು ಕುರ್ಚಿಯಲ್ಲಿ ದೊಪ್ಪನೆ ಕುಕ್ಕರಿಸಿ ಬಿಡುತ್ತಿದ್ದೆ. ಕೆಲವೊಮ್ಮೆ ನನ್ನ ಪ್ರಯತ್ನವಿಲ್ಲದೆಯೇ ಕಂಬನಿಯ ಧಾರ ಪ್ರವಾಹ ಎಷ್ಟೋ ಹೊತ್ತು ನನ್ನ ಕೆನ್ನೆಗಲ್ಲಿಳಿದು ಮಡಿಲನ್ನು ತೋಯಿಸಿದ್ದೂ ಉಂಟು. ನನ್ನ ಭಾವೋದ್ವಿಗ್ನ ಸ್ಥಿತಿಯನ್ನು ಬಲ್ಲ, ನನ್ನ ಸ್ವಭಾವ, ಪ್ರವೃತ್ತಿಗಳನ್ನು ಹತ್ತಿರದಿಂದ ಅರಿತಿದ್ದ ಪುಟ್ಟಣ್ಣನವರೇ ನನ್ನನ್ನು ಡಿಸ್ಟರ್ಬ್ ಮಾಡಲು ಬಿಡುತ್ತಿರಲಿಲ್ಲ. ಉದ್ವಿಗ್ನತೆ ಕಳೆದು ಶಾಂತ ಸ್ಥಿತಿಗೆ ಬಂದಾಗ, ನಾನು ವಾಸ್ತವ ಪ್ರಪಂಚಕ್ಕೆ ಮರಳಿದ

ಮೇಲೆಯೇ ನನಗೆ ನಾನು ಎಂತಹ ಸ್ಥಿತಿಯಲ್ಲಿ ಇದ್ದೆ ಎಂಬುದು ತಿಳಿಯುತ್ತಿತ್ತು.

ನನ್ನನ್ನು ಕಾಡಿದ ಮತ್ತೊಂದು ಚಿತ್ರ 'ಗೆಜ್ಜೆಪೂಜೆ' ಆದರೆ ಇಲ್ಲಿನ ಕಥಾವಸ್ತು ಆಂತರಿಕವಾಗಿ ಕಲಕುವಂಥದ್ದಲ್ಲವಾದರೂ ಬಹುದೊಡ್ಡ ಸಾಮಾಜಿಕ ಸಮಸ್ಯೆಯೊಂದನ್ನು ನಮ್ಮ ಮುಂದಿರಿಸುತ್ತದೆ. ಎಲ್ಲರೂ ಮನುಷ್ಯರಾಗಿಯೇ ಹುಟ್ಟುತ್ತೇವೆ. ಭೂಮಿ, ಬಾನು, ತಾನು, ಬದುಕು ಎಲ್ಲರಿಗೂ ಸಮಾನ ಆದರೂ ಸಮಾಜ ವ್ಯಕ್ತಿ ವ್ಯಕ್ತಿಗಳ ನಡುಗೆ ಜಾತಿ. ವೃತ್ತಿ, ಆರ್ಥಿಕತೆಯಿಂದ ಅಸಮಾನತೆಯ ಅಡ್ಡಗೋಡೆಗಳನ್ನು ನಿರ್ಮಿಸಿ. ಸಾಮಾಜಿಕ ನ್ಯಾಯ ವಂಚಿತರನ್ನಾಗಿ ಮಾಡುತ್ತದೆ. ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಪುರುಷರ ಕಾಮವಾಂಛೆಗಳ ಪೂರೈಕೆಗೆ ಇರಲೆಂಬ ಸ್ವಾರ್ಥದಿಂದ 'ಸೂಳೆ' 'ದೇವದಾಸಿ' ಎಂಬ ಹೆಸರಿನಲ್ಲಿ ಶೋಷಣೆಗೆಂದೇ ಒಂದು ಸ್ತ್ರೀ ಸಮುದಾಯ. ಅಥವಾ ವರ್ಗವನ್ನು ಸೃಷ್ಟಿಸಿ ಬಿಡುತ್ತದೆ. ದೇವರ ಹೆಸರಿನಲ್ಲಿ ಗೆಜ್ಜೆ ಕಟ್ಟಿಸಿಕೊಂಡು, ಪುರುಷರ ದೇಹ ಸುಖಕ್ಕೆ ಮೀಸಲಾಗುವದನ್ನೇ ತಮ್ಮ ವೃತ್ತಿಯಾಗಿಸಿಕೊಂಡು ಬಾಳುವ ಈ ವರ್ಗಕ್ಕೆ ಸಮಾಜದಲ್ಲಿ ಬೇರೆ ಹೆಣ್ಣು ಮಕ್ಕಳಂತೆ ಮದುವೆಯಾಗಿ ಸಂಸಾರ ಮಾಡುವ ಹಕ್ಕಿಲ್ಲ. ಆನುವಂಶಿಕವಾಗಿ ಅನುಸರಣೆಯಾಗುತ್ತಾ ಬಂದ ಈ ಪದ್ಧತಿಯಲ್ಲಿ ಒಬ್ಬನನ್ನು ಮದುವೆಯಾಗಿ ಮರ್ಯಾದೆಯಿಂದ ಬಾಳುವುದಕ್ಕೆ ಅವಕಾಶವಿಲ್ಲ; ಸಮಾಜವೂ ಇದನ್ನು ಪುರಸ್ಕರಿಸುವುದಿಲ್ಲ. ಒಮ್ಮೆ 'ಗೆಜ್ಜೆಪೂಜೆ; ವಿಧಿಗೆ ಒಳಗಾದ ಮೇಲೆ ಅವಳು ದೇವರ ಮೀಸಲು ಹೆಣ್ಣು. ಪೂಜಾರಿಯಾದವನೋ, ಇಲ್ಲ ಶ್ರೀಮಂತನಾದವನೋ ಯಾವನಾದರೂ ಹಣದ ಆಮಿಷದೊಂದಿಗೆ ದೇಹ ಸುಖಕ್ಕೆ ಮುಂದಾದಾಗ ಮೌನವಾಗಿ ಒಪ್ಪಿಸಿಕೊಳ್ಳುವುದೇ ಅವರ ವಿಧಿನಿಯಮ. ಇಂಥ ಮನಕಲಕುವ ಕಥಾವಸ್ತುವನ್ನುಳ್ಳ ಗೆಜ್ಜೆ ಪೂಜೆಯೂ ನನಗೊಂದು ಸವಾಲೇ ಆದರೆ 'ಶರಪಂಜರ'ದಷ್ಟು ಮಾನಸಿಕ ಉದ್ವಿಗ್ನತೆಗೆ ಎಡೆಯಿಲ್ಲವಾದದೂ ಪ್ರೀತಿಯ ವಿಷಯದಲ್ಲಿ ನಿರಾಶೆಯಾದಾಗ, ತಾನು ಪ್ರೀತಿಸಿದ ತನ್ನ ಸಹಪಾಠಿಯನ್ನು ಮದುವೆಯಾಗುವುದಕ್ಕೆ ತನ್ನ ಜಾತಿ, ವೃತ್ತಿ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ, ಮದುವೆಯಾಗದಿದ್ದರೂ ಮದುವೆಯಾದ ಗಂಡನಿಗಿಂತೂ ಹೆಚ್ಚು ನಿಷ್ಠೆಯಿಂದ ತಾಯಿಯ ಯೋಗಕ್ಷೇಮ ನೋಡಿಕೊಂಡ, ತನ್ನ ಹುಟ್ಟಿಗೆ ಕಾರಣನಾದ ತಂದೆಯಿಂದಲೇ ತಮ್ಮಿಬ್ಬರ ಸಂಬಂಧದ ಗುಟ್ಟು, ತಾನು ಹೆಣ್ಣುಕೊಡುತ್ತಿರುವ ಮನೆಯವರಿಗೆ ತಿಳಿಯಬಾರದ ಕಾರಣ. ಪರೋಕ್ಷವಾಗಿ ಆ ಮನೆಯ ಜೊತೆ ಸಂಬಂಧ ವ್ಯವಹಾರಗಳನ್ನು ಮುಂದುವರೆಸದೆ ತನ್ನ ಮತ್ತು ತನ್ನ ಮಗಳ ಬಾಳನ್ನು ಉಳಿಸಬೇಕೆಂದೂ ಭವಿಷ್ಯದಲ್ಲಿ ಯಾವುದೇ ಅನಾಹುತಕ್ಕೆ ಎಡೆಯಾಗದಂತೆ ನೋಡಿಕೊಳ್ಳಬೇಕೆಂದೂ

ಅತ್ಯಂತ ಆ-- ರೀತಿಯಲ್ಲಿ ಯಾಚನೆ ಮುಂದಿಟ್ಟಾಗ ಭಾವನಾತ್ಮಕವಾಗಿ ಅವಳು ಕೊಲೆಯಾಗುತ್ತಾಳೆ. ತಾನು ಪ್ರೀತಿಸಿದವನೊಡನೆ ಮದುವೆಯಾಗಿ. ಎಲ್ಲರಂತೆ ಗೃಹಿಣಿಯಾಗಿ ಬಾಳಬೇಕೆಂಬ ಕನಸು ಮುರುಟಿ ಹೋಗುತ್ತದೆ. ಎಲ್ಲ ಸನ್ನಿವೇಶಗಳು ಅವಳ ಆಕಾಂಕ್ಷೆಗೆ ವಿರುದ್ಧವಾಗಿ ಹುಟ್ಟಿಕೊಂಡಾಗ ಅಸಹಾಯಕತೆಯಿಂದ ನಿಟ್ಟುಸಿರಿಡುತ್ತಾಳೆ. ಎಂಥ ಸಂದಿಗ್ಧ! ಮರ್ಯಾದಸ್ತ ಮನುಷ್ಯನ ಮಗಳಾದರೂ ಅದನ್ನು ಬಹಿರಂಗವಾಗಿ ಹೇಳಿಕೊಳ್ಳಲಾಗದ ದುರಂತ! ಪರಂಪರಾಗತವಾಗಿ ಬಂದ ಸೂಳೆ ಸಂಪ್ರದಾಯದಿಂದ ಬಿಡುಗಡೆ ಹೊಂದಿ ಸಮಾಜದಲ್ಲಿ ಗೌರವದಿಂದ ಬಾಳಬೇಕೆಂದುಕೊಂಡು, ಅನಿವಾರ್ಯ ಒತ್ತಡಗಳಿಂದ ಇಚ್ಛೆಗೆ ವಿರುದ್ಧವಾಗಿ ಮತ್ತೆ ಅದೇ ವೃತ್ತಿಗೆ ಒಳಗಾಗಿ ಬದುಕಬೇಕಾದ ದುರಂತ! ನಾಯಕಿಗೆ ಇದೆಲ್ಲ ಅಸಹನೀಯ ಕಾರ್ಯದಿಂದ ಅಮಾನುಷತೆಯಿಂದ ಕೂಡಿದ ಇಂತಹ ಸಾಮಾಜಿಕ, ಸಂಪ್ರದಾಯಿಕ ಸಂಕೋಲೆಯಿಂದ ಬಿಡುಗಡೆಯನ್ನು ಸಾವಿನ ದುರಂತದ ಮೂಲಕ ಕಂಡುಕೊಳ್ಳುತ್ತಾಳೆ.

ಸೂಳೆಯ ಮಗಳಾಗಿ ಅಭಿನಯಿಸಿದ ನನಗೆ ಅಂತರಂಗದ ನೋವಿನ ಸಾಕ್ಷಾತ್ಕಾರವಾಯಿತು. ಅವರ ಅಸಹಾಯಕತೆಯ ನಿಟ್ಟುಸಿರಿನ ಬಿಸಿ ನನ್ನನ್ನು ಸುಡುತ್ತಿರುವಂತೆ ಭಾಸವಾಯಿತು. ಪ್ರೀತಿಗಾಗಿ ಮರ್ಯಾದೆಯ ಬಾಳಿಗಾಗಿ ತುಡಿದ ತಹತಹಿಸುವ ಮನಃ ಸ್ಥಿತಿಗಳು ನನ್ನವೂ ಆಗಿದ್ದವು.

ಅದೇನೋ ನಾನು ಅಭಿನಯಿಸುವ ಎಲ್ಲ ಚಿತ್ರಗಳಲ್ಲೂ ನಾಯಕಿಯರು ಅತೃಪ್ತರು. ಹತಾಶರು. ದುರಂತದಲ್ಲಿಯೇ ಬದುಕಿನ ಪರ್ಯವಸಾನ ಎಷ್ಟರ ಮಟ್ಟಿಗೆ ಇವು ನನ್ನ ಮನಸ್ಸನ್ನು ಕಲಕಿದವೆಂದರೆ ನಾನು ಜೀವನದಲ್ಲಿ ಸುಖವೇ ಇಲ್ಲ; ಇಡೀ ಜಗತ್ತು ನಿರಾಶೆ ಹತಾಶೆಗಳ ಗೂಡಾಗಿದೆ. ಬದಲಿಸಲಾಗದ ಬದುಕು; ಬದಲಿಸಲಾಗದ ಸಮಾಜ. ಹೀಗಿರುವಾಗ ನನ್ನ ಅಸ್ತಿತ್ವಕ್ಕೆ ಅರ್ಥವಿರಲು ಸಾಧ್ಯವೇ? ಹೆಚ್ಚು ಕಡಿಮೆ. ನನ್ನ ಪಯಣವೂ ಇಂತಹದೇ ಕೆಲವು ಮನಃ ಸ್ಥಿತಿಗಳ ಮೂಲಕವೇ ಸಾಗಿದ್ದರಿಂದ ಒಂದೊಂದು ಸಲ ನನಗೂ ಬದುಕು ಬೇಸರವಾಗಿ, ಮಾನಸಿಕ ತಲ್ಲಣಗಳ ಒತ್ತಡವನ್ನು ಭರಿಸಲಾಗದ ಸ್ಥಿತಿಯಲ್ಲಿ ಆತ್ಮಘಾತಕ್ಕೂ ಪ್ರಯತ್ನಿಸಿದ್ದುಂಟು.

ಕಥೆ ಬರೆಯುವುದೂ ಅಂತಹ ಕಥಾ ಚಿತ್ರಗಳಲ್ಲಿ ಅಭಿನಯಿಸುವುದೂ ಒಂದು ಹಂತದಲ್ಲಿ ನೋವೇ ಆದರು ವಾಸ್ತವ ಬದುಕಿಗೆ ಒಡ್ಡಿಕೊಂಡ ಚೇತನಗಳ ಯಾತನೆ ಊಹಿಸಿಕೊಳ್ಳುವುದೂ ಹಿಂಸೆಯಾಗುತ್ತದೆ.

"ಸರ್ವಮಂಗಳಾ" ನಾಯಕಿ ಸರ್ವಮಂಗಳೆ ಅಥವಾ ಮಂಗಳೆಯೂ ಬಯಸಿದವನನ್ನು ಪಡೆಯುವುದಿಲ್ಲ. ಆದರೆ ಕುಟುಂಬದ ಗೌರವ, ಸಮಾಜದ ಗೌರವ-ಹೆಣ್ಣು ಅವಿವಾಹಿತಳಾಗಿ ಉಳಿಯುವಂತಿಲ್ಲ. ಅಲ್ಲದೆ ಹೆತ್ತ ತಂದೆ ತಾಯಿಗಳೂ ಮಕ್ಕಳನ್ನು ಅರ್ಥ ಮಾಡಿಕೊಳ್ಳದೆ ಅವರವರೇ ತಮ್ಮ ಸ್ವಾರ್ಥಕ್ಕಾಗಿ ಒಲ್ಲದವರೊಂದಿಗೆ ಮದುವೆ ಮಾಡಿದಾಗ ಆ ಹೆಣ್ಣು ಜೀವನ ಪರ್ಯಂತ ತನ್ನ ವಿಧಿಯನ್ನು ಹಳಿಯುತ್ತಾ ಬದುಕುವ ವಿಚಿತ್ರ ಸನ್ನಿವೇಶ ಏರ್ಪಡುತ್ತದೆ. ಇದರಲ್ಲಿನ ನಾಯಕಿಯ ಸ್ಥಿತಿಯೂ ಹೀಗೆಯೇ. ತಂದೆಯ ದುರಾಸೆಯಿಂದ ನರಳುವ ಮುದುಕನ ಜೊತೆ ವಿವಾಹವಾಗುವುದಾದರೂ ಅದನ್ನು ನಿರಾಕರಿಸಿ, ಪ್ರತಿಭಟಿಸಿ ಹೊರಗೆ ಬರಲಾಗದೆ, ಒಳಗೇ ಸವೆಯುತ್ತಾ ಪತ್ನಿ ಧರ್ಮವನ್ನು ನಿಯತ್ತಾಗಿ ನಿರ್ವಹಿಸುತ್ತಾಳೆ. ಒಂದು ಘಳಿಗೆಯೂ ಸಂಸಾರ ಸುಖವನ್ನು ಕಾಣದೆ, ಅವರಿವರ ಸೇವೆಯಲ್ಲೇ ತನ್ನನ್ನು ತೇಯುತ್ತ ಕಡೆಗೆ ಅನಾರೋಗ್ಯದಿಂದ ಸಾಯುವುದರ ಮೂಲಕ ಆ ಚೈತನ್ಯಕ್ಕೆ ಬಿಡುಗಡೆಯಾಗುತ್ತದೆ. ಇದೇ ರೀತಿ "ಉಯ್ಯಾಲೆ"ಯಲ್ಲಿಯೂ ಗಂಡನ ಪ್ರೀತಿಗಾಗಿ ಹಂಬಲಿಸುವ ನಾಯಕಿ. ಒಂದು ಕಡೆ ಉಂಟಾದ ಪ್ರೀತಿ ವಂಚನೆಯನ್ನು ಮತ್ತೊಂದು ಕಡೆಯಿಂದ ತುಂಬಿಕೊಳ್ಳುವುದಕ್ಕೂ ಆಗದ ರೀತಿಯಲ್ಲಿ ಸಂಪ್ರದಾಯದ ಕಟ್ಟು ಕಟ್ಟಳೆ. ಇದನ್ನು ಮೀರಲಾಗದೇ, ಮೀರದೆಯೂ ಇರಲಾಗದೆ ಮನಸ್ಸು "ಉಯ್ಯಾಲೆ" ಯಂತೆ ತೂಗಾಡುತ್ತದೆ. ಸಂಪ್ರದಾಯ ಎನ್ನು ಪೆಡಂಭೂತ ಹೆಣ್ಣಿನ ಪಾಲಿಗೆ ಭಯಂಕರವಾಗಿ ಪರಿಣಮಿಸುತ್ತದೆ. ಮನಸ್ಸು, ದೇಹಗಳೆಲ್ಲವನ್ನೂ ಬಿಡಿಸಲಾಗದ ಸಂಕೋಲೆಗಳಲ್ಲಿ ಬಿಗಿದು ಉಸಿರುಗಟ್ಟಿಸುತ್ತದೆ. ಇಷ್ಟೂ ಸಿನಿಮಾಗಳು ನನ್ನ ಪಾಲಿಗೆ ಅದೃಷ್ಟದ ಬಾಗಿಲುಗಳಾದವು. ಪುಟ್ಟಣ್ಣಾಜಿಯವರಂತಹ ನಿರ್ದೇಶಕರು, ತ್ರಿವೇಣಿ, ಚದುರಂಗರಂತಹವರ ಕಥಾ ಸಾಹಿತ್ಯ. ಗಂಭೀರವಾದ ಸಾಮಾಜಿಕ ಚಿಂತನೆಗಳು, ಅತ್ಯಂತ ವಾಸ್ತವದ ನೆಲೆಯಲ್ಲಿನ ಕಲಾತ್ಮಕ ಚಿಂತನೆಗಳು, ಅತ್ಯಂತ ವಾಸ್ತವದ ನೆಲೆಯಲ್ಲಿನ ಕಲಾತ್ಮಕ ದೃಶ್ಯ ಸಂಯೋಜನೆ, ಹೃದಯ ಸ್ಪರ್ಶಿಯಾದ ಸಂಭಾಷಣೆಗಳು ನಾದಮಾಧುರ್ಯದಿಂದ, ಅರ್ಥ ಪೂರ್ಣ ಸಾಹಿತ್ಯದಿಂದ ಕೂಡಿದ ಗೀತೆಗಳು--ಯಶಸ್ಸಿನ ಕಹಳೆ ಮೊಳಗಿದವು.



"ಬೆಳ್ಳಿಮೋಡ"ದ ಚಿತ್ರದಿಂದ "ಮಿನುಗುತಾರೆ" ಎಂಬ ಅಭಿಮಾನದ ಬಿರುದು ನನ್ನ ಪಾಲಿನ ಸ್ವರ್ಣರೇಖೆಯಾಯಿತು. ಹಲವು ಪಾತ್ರಗಳಲ್ಲಿ,

ಹಲವು ಮನಃ ಸ್ಥಿತಿಗಳನ್ನು ಬಿಂಬಿಸುವಲ್ಲಿ ನನ್ನೆಲ್ಲ ಪ್ರಯತ್ನವಿತ್ತು. ಮಗಳು. ಪ್ರೇಯಸಿ, ಪ್ರೀತಿವಂಚಿತ. ಮಾತೃವಾತ್ಸಲ್ಯವನ್ನು ತುಂಬಿಕೊಂಡ ಸೋದರಿ– ಹೀಗೆ ಹಲವು ಸಂಬಂಧಗಳಲ್ಲಿ ನಿರ್ವಂಚನೆಯಿಂದ ನಟಿಸಿದ್ದೆ. ಚಿತ್ರಕ್ಕೆ ರಾಜ್ಯ ಪ್ರಶಸ್ತಿ ಮತ್ತು ನನಗೆ ವೈಯಕ್ತಿಕವಾಗಿ "ಅತ್ಯುತ್ತಮ ನಟಿ" ಪ್ರಶಸ್ತಿ ದೊರೆಕಿದ್ದು ನನಗೆ ಮುಂದಿನ ಚಿತ್ರಗಳಿಗೆ ಸಾಕಷ್ಟು ನೈತಿಕ ಬಲವನ್ನು, ಆತ್ಮವಿಶ್ವಾಸವನ್ನು ಗಳಿಸಿಕೊಳ್ಳಲು ಪ್ರಚೋದನೆಯಾಯಿತು.

ಪುಟ್ಟಣ್ಣಾಜಿಯವರು ಕೇವಲ ಕಲ್ಲಾಗಿದ್ದ ನನ್ನನ್ನು ಸುಂದರ ಶಿಲ್ಪವಾಗಿ ಕಡೆದಿರಿಸಿದರು. ನನ್ನರಿವಿಗೇ ಬಾರದಿದ್ದ ನನ್ನ ಪ್ರತಿಭೆಯನ್ನು ಸಾಕಷ್ಟು ದುಡಿಸಿಕೊಂಡರು. ಅದಕ್ಕಾಗಿಯೇ ನನಗೆ ಅವರ ಬಗ್ಗೆ ಅಪಾರ ಪ್ರೀತಿ, ಗೌರವ, ಎಲ್ಲಕ್ಕಿಂತ ಅವರ ಸಾಮರ್ಥ್ಯದ ಬಗ್ಗೆ ಅಭಿಮಾನ. ಅವರ ನಿರ್ದೇಶನದಲ್ಲಿ ಅಭಿನಯಿಸುವುದೇ ಒಂದು ಮಹಾ ಸುಯೋಗ ಎಂದು ಭಾವಿಸಿದ್ದೆ. ಅವರಲ್ಲಿದ್ದ ಮತ್ತು ನಾನು ಗಮನಿಸಿದ ಒಂದು ದೊಡ್ಡ ಗುಣವೆಂದರೆ ಪ್ರತಿಭೆ, ಸಾಮರ್ಥ್ಯಗಳನ್ನು ಥಟ್ಟನೇ ಗುರುತಿಸಿ, ಅದನ್ನು ಪೋಷಿಸುವುದು; ಪ್ರೋತ್ಸಾಹಿಸುವುದು. ಇದಕ್ಕೆ ನಿದರ್ಶನವಾಗಿ ನನ್ನ ಜೊತೆ ನಡೆದ ಒಂದು ಪ್ರಸಂಗ ಹೀಗಿದೆ; ಶೃಂಗೇರಿಯ ಆಸುಪಾಸಿನಲ್ಲಿ ಷೂಟಿಂಗ್ ನಡೆಯುತ್ತಿತ್ತು.



ನನಗೆ ಅಂಥಹ ಸಂದರ್ಭಗಳಲ್ಲಿ, ಅಲ್ಲಿಯೇ ಸುತ್ತಮುತ್ತ ನೋಡಬೇಕಾದ ಸ್ಥಳಗಳಿದ್ದಲ್ಲಿ, ಅಲ್ಲಿಗೆ ಭೇಟಿ ನೀಡಬೇಕೆಂಬ ಬಯಕೆ ಸಾಮಾನ್ಯವಾಗಿರುತ್ತಿತ್ತು. ಹಾಗಾಗಿ ಶೃಂಗೇರಿಯ ಬಳಿ ಇದ್ದಾಗ, ಶೃಂಗೇರಿ ಶಾರದಾಪೀಠವನ್ನು

ನೋಡಬೇಕೆಂಬ ಆಸೆಯಾಯಿತು. ಶೃಂಗೇರಿ ಶಾರದೆಯ ಆ ಸುಂದರ ಮೂರ್ತಿಯನ್ನು ಕಣ್ತುಂಬಿಸಿಕೊಳ್ಳಬೇಕೆಂಬ ಆಸೆ ಒಂದು ಕಡೆಯಾದರೆ, ನನ್ನ ಆಸ್ತಿಕ ಮನಸ್ಸು ಅಥವಾ ಧಾರ್ಮಿಕ ಶ್ರದ್ಧೆ ಮತ್ತೊಂದು ಕಡೆ. ನನ್ನಾಸೆಯನ್ನು ಪುಟ್ಟಣ್ಣಾಜಿ ಅವರಲ್ಲಿ ಹೇಳಿಕೊಂಡೆ. ನಾನು ಕೇಳಿದ್ದೇ, ಮರುಕ್ಷಣದಲ್ಲಿ ನನ್ನನ್ನು ಅಲ್ಲಿಗೆ ಕರೆದೊಯ್ದರು. ಶಾರದೆಯ ವಿಗ್ರಹ ಅದ್ಭುತ ಕಲಾಕೃತಿಯಾಗಿತ್ತು. ಜೀವಕಳೆಯಿಂದ ಕೂಡಿದ್ದ ವಿಗ್ರಹ ಸಾಕ್ಷಾತ್ ಸರಸ್ವತಿಯೇ ಸಜೀವವಾಗಿ ಕುಳಿತಿದ್ದಂತೆ ಇತ್ತು. ಆ ಸುಂದರ ದೇವತಾ ವಿಗ್ರಹ, ಪ್ರಶಾಂತವಾದ ಪ್ರಕೃತಿಯ ಪರಿಸರ ನೋಡುತ್ತಾ, ಅನುಭವಿಸುತ್ತಾ ಯಾವುದೋ ಭಾವನಾ ಲೋಕಕ್ಕೆ ನನ್ನನ್ನು ಒಯ್ದಂತೆ ಎನಿಸಿತು. ಭಾವ ತನ್ಮಯದಲ್ಲಿ ಮೈ ಮರೆತಿದ್ದ ನನ್ನನ್ನು "ಕಲ್ಪನಾ" ಏನು ಮಾಡುತ್ತಿದ್ದೀಯ; ಯಾವ ಕನಸಿನ ಲೋಕದಲ್ಲಿದ್ದೀಯ. ಕಣ್ಣು ಮಚ್ಚಿ ಪರಧ್ಯಾನ ಬೇಡ. ಈ ಇಲ್ಲಿ ಶಿಲ್ಪ ಸೌಂದರ್ಯವನ್ನು ಅವಲೋಕಿಸು. ಇದು ಯಾವ ಶಿಲ್ಪಿಯ ಮಾಂತ್ರಿಕ ಹಸ್ತ ಸ್ಪರ್ಶವೋ ಏನೋ. ಅವನು ಯಾರೋ, ಎಲ್ಲಿಯವನೋ, ನಮಗೆ ಗೊತ್ತಿಲ್ಲ. ಆದರೆ ಆತ ಒಬ್ಬ ಅದ್ಭುತ ಕಲಾವಿದ. ಅವನ ಕಲಾ ಪ್ರತಿಭೆಯ ಸ್ಪರ್ಶದಿಂದ, ಕೌಶಲದಿಂದ ಮೈ ತಳೆದ ಈ ಮೂರ್ತಿ ಇಂದು ಪೂಜಾರ್ಹ ಸ್ಥಾನದಲ್ಲಿದೆ. ಈ ವಿಗ್ರಹದ ಮೂಲಕ ಅವನ ಅಂತಸ್ಸತ್ವವೂ ಇಲ್ಲಿ ಬೆಳಗುತ್ತಿದೆ. "ಎಂದಾಗ ಕಲಾವಿದರ ಬಗ್ಗೆ ಅವರ ಪ್ರೀತಿ. ಗೌರವಗಳು ನನಗೆ ಮನದಟ್ಟಾದುವು. ಬಹುಶಃ ನನ್ನ ಅಂತಸ್ಸತ್ವವನ್ನು ನನ್ನ ಪಾತ್ರಗಳ ಮೂಲಕ ಬೆಳಗುತ್ತಿದ್ದಾರೆ ಅಂತ ಅರ್ಥಮಾಡಿಕೊಂಡೆ.

ಪುಟ್ಟಣ್ಣಾಜಿಯ ವರದ ಹಸ್ತ ನನ್ನೆಡೆಗೆ ಚಾಚಿರದಿದ್ದರೆ ನಾನು ಎಲ್ಲೋ, ಊರೂರು ಅಲೆಯುತ್ತ, ಕಾಸುಕಾಸಿಗೂ ಹಪಹಪಿಸುತ್ತಾ ಬಡ ರಂಗಕಲಾವಿದೆಯಾಗಿ, ಹತ್ತರಲ್ಲಿ ಹನ್ನೊಂದು ಎಂಬಂತೆ ಮರೆಯಾಗಿ ಹೋಗುತ್ತಿದ್ದೆನೋ ಏನೋ.

"ಬೆಳ್ಳಿ ಮೋಡ"ದ ನಂತರ ಹಲವಾರು ಚಿತ್ರಗಳಲ್ಲಿ ಅಭಿನಯಿಸಿದೆ. ವೈವಿಧ್ಯಮಯವಾದ ಪಾತ್ರಗಳಲ್ಲಿ ಕಾಣಿಸಿಕೊಂಡೆ. ಅವಕಾಶಗಳು ಮೇಲಿಂದ ಮೇಲೆ ನನ್ನ ನಿರೀಕ್ಷೆಗೂ ಮೀರಿ ಬಂದವು. "ಪ್ರೇಮಕ್ಕೂ ಪರ್ಮಿಟ್ಟೇ", "ಇಮ್ಮಡಿ ಪುಲಿಕೇಶಿ", ಬಂಗಾರದ ಹೂವು-ಹೀಗೆ ಒಂದಾದ ಮೇಲೊಂದು ಚಿತ್ರಗಳು ಕ್ರಮೇಣ ನನ್ನನ್ನು ಅತ್ಯಂತ ಸಮರ್ಥ ಅಭಿನೇತ್ರಿ ಎಂದು ಕರೆದರು. ಸಹಜ ನಟನೆ, ಭಾವಪೂರ್ಣ ಸಂಭಾಷಣೆ, ವಿಶಿಷ್ಟ ಮ್ಯಾನರಿಸಂ-ಇವುಗಳಿಗೆ ಮೆಚ್ಚುಗೆಯ ಕರತಾಡನಗಳು ಎಲ್ಲೆಲ್ಲೂ ಕೇಳಿಬಂದವು.

ಕುಷ್ಠ ರೋಗಿ ಹೆಣ್ಣಾಗಿ "ಬಂಗಾರದ ಹೂವು"ಚಿತ್ರದಲ್ಲಿ ನಟಿಸಿ ಅಪಾರ ಮೆಚ್ಚುಗೆ ಗಳಿಸಿದೆ. ಕುಷ್ಠದ ಬಗ್ಗೆ ಇದ್ದ ಸಾಮಾಜಿಕ ಧೋರಣೆಯಲ್ಲಿ ಪರಿವರ್ತನೆಯಾಗಬೇಕೆಂಬ ಸಂದೇಶ ಹೊತ್ತ ಚಿತ್ರ ಅದಾಗಿತ್ತು. ಅವರನ್ನು ನಿಕೃಷ್ಟವಾಗಿ ಕಾಣದೆ, ಭತ್ಸ್ಯನೆ ತಾತ್ಸಾರಗಳಿಂದ ನೋಡದೇ ಅವರೂ ಮನುಷ್ಯರಂತೆ ಬಾಳುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಡಬೇಕೆಂಬ ಸಂದೇಶವಿತ್ತು.



ಈಗಾಗಲೇ ನಾನು ಶರಪಂಜರ, ಗೆಜ್ಜೆ ಪೂಜೆ, ಸರ್ವಮಂಗಲ, ಉಯ್ಯಾಲೆ- ಮುಂತಾದ ಚಿತ್ರಗಳಿಂದ ಸೂಪರ್ ಸ್ಟಾರ್ ಆಗಿದ್ದೆ. ಪತ್ರಿಕೆಗಳಂತೂ ನನ್ನ ಅಭಿನಯ ನೈಪುಣ್ಯ, ನನ್ನ ಅನನ್ಯವಾದ ಸಂಭಾಷಣೆಯ ಶೈಲಿಯನ್ನು ಏಕಗ್ರೀವವಾಗಿ ಹೊಗಳಿದವು. ಕಲ್ಪನಾ ಹೆಸರು ಕನ್ನಡಿಗರ ಮನೆ ಮಾತಾಯಿತು.

ಎಷ್ಟೆಲ್ಲ ಪಾತ್ರಗಳನ್ನು ನಿರ್ವಹಿಸಿದರೂ ನಾನೆಲ್ಲೂ ಅರೆನಗ್ನತೆಯಲ್ಲಾಗಲೀ, ಅಸಭ್ಯ ವೇಷಗಳಲ್ಲಾಗಲೀ ಕಾಣಿಸಿಕೊಳ್ಳಲು ಇಷ್ಟ ಪಡಲಿಲ್ಲ. ಜೊತೆಗೆ ನಾನು ಅಭಿನಯಿಸುತ್ತಿದ್ದ ಕಾಲದಲ್ಲಿ ಕಥಾಪ್ರಧಾನತೆ, ಸಾಮಾಜಿಕ ಮೌಲ್ಯಗಳು, ನೈತಿಕ ಮೌಲ್ಯಗಳು, ಸಂದೇಶಾತ್ಮಕತೆ ಇವೇ ಮೊದಲಾಗಿದ್ದವು. ಅಸಭ್ಯ ನಟನೆಯನ್ನಾಗಲೀ, ಅಸಭ್ಯ ವೇಷಭೂಷಣಗಳನ್ನಾಗಲೀ, ಅಸಭ್ಯ ನಡತೆಯನ್ನಾಗಲೀ ಸಹಿಸುತ್ತಿರಲಿಲ್ಲ. ಯಾರೇ ನಿರ್ದೇಶಕರಾಗಲೀ, ಸ್ವಲ್ಪವಾದರೂ ಮೈ ಕಾಣಿಸುವಂತೆ ಆದೇಶಿಸಿದರೆ, ನಾನು ಅದನ್ನು ಸೌಮ್ಯವಾಗಿಯೇ ವಿರೋಧಿಸುತ್ತಿದ್ದೆ; ಮತ್ತು ಮಾಡಲು ನಿರಾಕರಿಸುತ್ತಿದ್ದೆ. ಹಲವಾರು ಇಂಥ ಸಂದರ್ಭಗಳು ನನ್ನನ್ನು 'ಇಕ್ಕಟ್ಟಿಗೆ ಒಳಪಡಿಸುತ್ತಿದ್ದವು.

ಒಮ್ಮೆ "ಸರ್ವಮಂಗಳಾ" ಚಿತ್ರೀಕರಣ ನಡೆದಿತ್ತು. ಸರ್ವಮಂಗಳೆಯ ಬೆನ್ನಿಗೆ ಏಟುಬಿದ್ದು ನರಳುತ್ತಿದ್ದಾಗ ಗಂಡ ಅವಳ ಬೆನ್ನಿಗೆ ಉಪ್ಪು ಶಾಖ ಕೊಡುವ ದೃಶ್ಯ ಅದಾಗಿತ್ತು. ಸ್ವತಃ ಚದುರಂಗರೇ ನಿಂತು ದೃಶ್ಯವನ್ನು ನಿರ್ದೇಶಿಸುತ್ತಿದ್ದರು. "ಕಲ್ಪನಾ ಈಗ ಕ್ಯಾಮರಾ ಆನ್ ಆಗುತ್ತೆ. ಚಿತ್ರೀಕರಣ ಶುರುವಾಗುತ್ತೆ. ನೀನು ನಿನ್ನ ರವಿಕೆ ತೆಗೆದುಬಿಟ್ಟು ಬರೀ ಸೆರಗು ಹೊದ್ದುಕೋ" ಎಂದರು. ನನಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಇಂತಹ ಹಿರಿಯ ಸಾಹಿತಿ ಹೀಗೆ ಆದೇಶಿಸಬಹುದೇ? ನನಗೆ ಮೌನವಾಗಿ ಆದೇಶ ಪಾಲಿಸುವ ಮನಸ್ಸಾಗಲಿಲ್ಲ.

"ಚದುರಂಗರೇ, ಇದೇನು ನಿಮ್ಮ ಮಾತು? ನೀವೊಬ್ಬರು ಉತ್ತಮ ಸಾಹಿತಿ ಎಂದು ನಿಮ್ಮ ಬಗ್ಗೆ ಅಪಾರ ಗೌರವ ಇರಿಸಿಕೊಂಡಿದ್ದೆ. ಈಗ ನೋಡಿದರೆ ಈ ರೀತಿ ಆದೇಶಿಸುತ್ತಿದ್ದೀರಿ. ಯಾಕೆ ನಿಮಗೂ ಕಮರ್ಷಿಯಲ್ ಸಿನಿಮಾಗಳಂತೆ ಸೆಕ್ಸ್ ಎಕ್ಸಪ್ಲಾಯಿಟ್ ಮಾಡೋ ಹುಚ್ಚು ಬಂತೇನೋ?" ಎಂದು ಕೇಳಿಯೇ ಬಿಟ್ಟೆ. ಆದರೆ ಇದರಿಂದ ಚದುರಂಗರು ಕೋಪಿಸಿಕೊಳ್ಳಲಿಲ್ಲ. ನಿರ್ದೇಶಕನೆಂಬ ಅಹಂಕಾರವನ್ನೂ ತೋರಲಿಲ್ಲ. ಸಮಾಧಾನದಿಂದಲೇ ಆ ದೃಶ್ಯದ ಸನ್ನಿವೇಶವನ್ನು ವಿವರಿಸಿ ಹೇಳಿ, ಹಳ್ಳಿಗಳಲ್ಲಿ ಉಪ್ಪು ಶಾಖ ಕೊಡುವ ರೀತಿಯನ್ನು ತಿಳಿಸಿಕೊಟ್ಟರು. ಜೊತೆಗೆ, ಸೆಕ್ಸ್ ಎಕ್ಸ್‌ಪ್ಲಾಯಿಟ್ ಮಾಡಬೇಕಾದಲ್ಲಿ ಕ್ಯಾಮರಾವನ್ನು ಮುಂದಿಡುತ್ತಿದ್ದರೇ ಹೊರತಾಗಿ ಬೆನ್ನಿಗಲ್ಲ–ಎಂದು ತಮ್ಮ ಉದ್ದೇಶದ ಹಿಂದಿನ ಮನಸ್ಸಿನ ಸ್ವಚ್ಛತೆಯನ್ನು ಎತ್ತಿ ತೋರಿದರು. ಅವರನ್ನು ತಪ್ಪಾಗಿ ಭಾವಿಸಿದ್ದಕ್ಕೆ ನನಗೇ ಒಂದು ರೀತಿ ಮುಜುಗರವಾಯಿತು.

ಮುಂದಿನ ದೃಶ್ಯದಲ್ಲಿ ಬೆನ್ನಿಗೆ ಶಾಖ ಕೊಡುತ್ತಿದ್ದ ಸಮಯದಲ್ಲಿ ನಾಯಕಿಯ ಪ್ರಿಯಕರನ ಪ್ರವೇಶವಾಗುವ ಸನ್ನಿವೇಶ. ಆತ ಒಳಗೆ ಬರುತ್ತಿದ್ದಂತೆ ಥಟ್ಟನೆ, ಅನಾಯಾಸವಾಗಿ ರಿಫ್ಲೆಕ್ಸ್‌ನಿಂದ ಸೆರಗೆಳೆದು ಮುಚ್ಚಿಕೊಂಡೆ. ಇದು ಎಷ್ಟು ಸಹಜವಾಗಿ, ಸ್ವಾಭಾವಿಕವಾಗಿ ಮೂಡಿ ಬಂತೆಂದರೆ, ಚದುರಂಗರೇ ಆಶ್ಚರ್ಯ ಚಕಿತರಾದರು. "ಭೇಷ್ ಕಲ್ಪನಾ ಭೇಷ್" ಸ್ತ್ರೀ ಸಹಜವಾದ ಪ್ರತಿಕ್ರಿಯೆ ತೋರಿಸಿ, ಷಾಟನ್ನು ಯಶಸ್ವಿಯಾಗಿಸಿದೆ. ನಿನ್ನ ಸಮಯ ಸ್ಫೂರ್ತಿಗೆ, ಸಹಜ ಅಭಿನಯಕ್ಕೆ ನನ್ನ ಅಭಿನಂದನೆಗಳು ಎಂದು ಕೊಂಡಾಡಿದರು.

ಇಂತಹ ಸಮರ್ಥ ನಿರ್ದೇಶಕರು, ಅತ್ಯುತ್ತಮ ಕತೆ, ಸಂಭಾಷಣೆಗಳಿರುವ ಚಿತ್ರಕ್ಕೆ ಪ್ರಶಸ್ತಿಗಳು ಬರುವುದು ಸ್ವಾಭಾವಿಕವೇ.

ಮುಂದೆಯೂ ಸುಮಾರು ಚಿತ್ರಗಳು ಬಂದವು. ಆದರೂ ಕಾದಂಬರಿ ಆಧಾರಿತ ಚಿತ್ರಗಳೆಂದರೆ ನಿರ್ದೇಶಕರ ದೃಷ್ಟಿ ನನ್ನತ್ತಲೇ ಇರುತ್ತಿತ್ತು.

1963 ರಿಂದ 1978 ರವರೆಗೆ, ಅನ್ಯ ಭಾಷೆಗಳೂ ಸೇರಿದಂತೆ ಸುಮಾರು 70 ಚಿತ್ರಗಳು ನನ್ನ ಸಾಧನೆಯ ಬತ್ತಳಿಕೆಯಲ್ಲಿದ್ದವು. ಹದಿನಾರು ವರ್ಷಗಳವರೆಗೆ ಚಲನಚಿತ್ರ ಸಾಮ್ರಾಜ್ಯವನ್ನು ಆಳಿದೆ. ಆದರೆ ಮಾಡುವ ಪ್ರತಿಯೊಂದು ಚಿತ್ರವೂ ಪುಟ್ಟಣ್ಣನವರ ಚಿತ್ರಗಳು ಕಂಡ ಯಶಸ್ಸು ಕಾಣಲಿಲ್ಲ.

ಕಲ್ಯಾಣ್ ಕುಮಾರ್, ರಾಜ್‌ಕುಮಾರ್, ಗಂಗಾಧರ್ ಮೊದಲಾದ ಮಹಾನ್ ಕಲಾವಿದರ ಜೊತೆ ನಟಿಸುವ ಸುಯೋಗ ಸಿಕ್ಕಿತು. ಆದರೆ ನಾಯಕಿ ಪ್ರಧಾನ



ಚಿತ್ರಗಳಲ್ಲಿ ಪೂರ್ಣ ಪ್ರತಿಭೆಯ ಪ್ರದರ್ಶನಕ್ಕೆ ಅವಕಾಶ ದೊರೆತಂತೆ ನಾಯಕ ಪ್ರಧಾನ ಚಿತ್ರಗಳಲ್ಲಿ ದೊರೆಯುತ್ತಿರಲಿಲ್ಲ. ರಾಜ್‌ಕುಮಾರ್ ಅವರು ಒಂದು ವಟ ವೃಕ್ಷದಂತೆ ಸಿನಿಮಾ ಜಗತ್ತನ್ನು ಆವರಿಸಿಬಿಟ್ಟರು. ಅವರಿಲ್ಲದ ಚಿತ್ರಗಳೇ ಇಲ್ಲ ಎಂಬಂತಾಯಿತು. ಆಗಾಗ ಹೊಸಹೊಸ ನಾಯಕರೂ ಸಿನಿರಂಗ ಪ್ರವೇಶ ಮಾಡುತ್ತಿದ್ದರೂ ರಾಜಕುಮಾರ್ ಕವಿಸುತ್ತಿದ್ದ ನೆರಳಿನಲ್ಲಿ ಅಷ್ಟಾಗಿ ಕಾಣದೆ ಹೋಗುತ್ತಿದ್ದರು. ನಾಯಕಿ ಪ್ರಧಾನ ಚಿತ್ರಗಳು ಸಾಧ್ಯವಾಗಬೇಕಾದರೆ ಪುಟಣ್ಣಾಜಿಯೇ ಒಂದು ಭರವಸೆಯಾಗಿದ್ದರು. ಸಿನಿಪ್ರೇಕ್ಷಕರೂ, ನಟರು, ಪುಟ್ಟಣ್ಣನವರಿಂದಲೇ ಇದನ್ನು ನಿರೀಕ್ಷಿಸುತ್ತಿದ್ದರು.

ನಾಯಕಿಯಾಗಿ ಅಭಿನಯಿಸಿದರೂ ಕಥೆ ನಾಯಕನ ಸುತ್ತಾ ಹೆಣೆದುಕೊಂಡಿರುತ್ತಿದ್ದರಿಂದ ಅಷ್ಟೇನೂ ಅಭಿನಯಕ್ಕೆ ಸ್ಕೋಪ್ ಇರುತ್ತಿರಲಿಲ್ಲ. ಅವರ ಆದರ್ಶಗಳಿಗೆ, ಅವರ ಸಾಧನೆಯ ಪ್ರಯತ್ನಗಳಿಗೆ ಬೆಂಬಲವಾಗಿ ನಿಲ್ಲುವುದು, ಸಹಕರಿಸುವುದು, ಅವರ ನೋವು ನಲಿವುಗಳಲ್ಲಿ ಸ್ವಲ್ಪ ಮಟ್ಟಿಗೆ ಪಾಲುದಾರಳಾಗುವುದು-ಇದಿಷ್ಟೇ ನಾಯಕಿಯ ವ್ಯಾಪ್ತಿಗೆ ಸಿಗುತ್ತಿದ್ದುದು.

ಮತ್ತೆ ನಾನು ಪುಟ್ಟಣ್ಣಾಜಿಯ ಗರಡಿಗೆ ಬಂದದ್ದು "ಕಪ್ಪು ಬಿಳುಪು" ಇದೊಂದು ರೀತಿಯಲ್ಲಿ ಸಾಂಕೇತಿಕ. ಆಧುನಿಕತೆ-ಸಾಂಪ್ರದಾಯಿಕತೆಯ ನಡುವಿನ ಸಂಘರ್ಷವನ್ನು ಬಿಂಬಿಸುವಂಥಾದ್ದು. ಈ ಎರಡನ್ನೂ ಪ್ರತಿನಿಧಿಸುವ ದ್ವಂದ್ವ ಪಾತ್ರದಲ್ಲಿ ಮೊದಲ ಬಾರಿಗೆ ಕಾಣಿಸಿಕೊಳ್ಳುವುದು ಥ್ರಿಲ್ಲೂ ಹೌದು; ಸವಾಲೂ ಹೌದು; ಅಳು ಮೋರೆಯ,ಹತಾಶೆಯ, ನಿರಾಶೆಯ, ಗಂಭೀರವಾದ ಪಾತ್ರಗಳಲ್ಲಿ ಮೆಚ್ಚಿಕೊಂಡಿದ್ದ, ಒಪ್ಪಿಕೊಂಡಿದ್ದ ಪ್ರೇಕ್ಷಕರಿಗೆ ಮತ್ತು ಸವಾಲೆನಿಸುವ ದ್ವಂದ್ವ ಅಥವಾ ದ್ವಿಪಾತ್ರಗಳಲ್ಲಿ ಹೇಗೆ ಅಭಿನಯಿಸುತ್ತಾಳೋ ಎಂಬ ಆತಂಕದಲ್ಲಿರಬಹುದಾದ ನಿರ್ದೇಶಕರಿಗೆ, ನಾನು ನನ್ನ ಸಾಮರ್ಥ್ಯವನ್ನು ಸಾಬೀತುಪಡಿಸಬೇಕಾಗಿತ್ತು ಎಷ್ಟೇ ಅಭಿನಯದ ಅನುಭವವಿದ್ದರೂ, ದ್ವಿಪಾತ್ರದಲ್ಲಿ ಹೇಗೋ ಏನೋ ಎಂಬ ಅಳುಕು ಇದ್ದೇ ಇತ್ತು. ಆದರೆ ನಾನು ನನ್ನಲ್ಲಿ

ರೂಢಿಸಿಕೊಳ್ಳುತ್ತಿದ್ದ ಆತ್ಮವಿಶ್ವಾಸ, ನಾನು ಎಂತಹ ಪಾತ್ರವನ್ನಾದರೂ ಸಮರ್ಥವಾಗಿ ನಿರ್ವಹಿಸಬಲ್ಲೆ ಎಂದು ಧೈರ್ಯ ತುಂಬಿ ಭರವಸೆಯ ಮಾತಾಡುತ್ತಿದ್ದ ಪುಟ್ಟಣ್ಣಾಜಿಯವರಿಂದಾಗಿ ನನಗೇ ನಂಬಲಾಗದ ರೀತಿಯಲ್ಲಿ ಅಭಿನಯಿಸಿ ಎಲ್ಲರಿಂದಲೂ ಸೈ ಎನಿಸಿಕೊಂಡದ್ದು ಅವಿಸ್ಮರಣೀಯ ಕ್ಷಣಗಳಾಗಿ ಪರಿಣಮಿಸಿದವು. ಸಾಮಾನ್ಯವಾಗಿ ದ್ವಿಪಾತ್ರಗಳು ಅವಳಿ ಮಕ್ಕಳಾಗಿರುತ್ತಾರೆ. ಆದರೆ ಇದರಲ್ಲಿ ಅಕ್ಕ–ತಂಗಿಯರ ಮಕ್ಕಳೇ ಅವಳಿ ಮಕ್ಕಳಂತಿದ್ದು, ಸ್ವಭಾವದಲ್ಲಿ ಮಾತ್ರ ಒಬ್ಬರಿಗಿಂತ ಒಬ್ಬರು ಭಿನ್ನರಾಗಿರುತ್ತಾರೆ. ಉತ್ತರ ದಕ್ಷಿಣ ಮುಖಗಳಂತಿರುವ ಇವರ ಜೀವನ ಶೈಲಿ, ನಂಬಿಕೆಗಳು, ವಿಚಾರಗಳು ತದ್ವಿರುದ್ಧ. ಸಂಪ್ರದಾಯಸ್ಥ ಮನಸ್ಸಿನ ವತ್ಸಲಾ ಎಂಬ ಹುಡುಗಿ ಮುಗ್ಧೆ. ಈ ಮುಗ್ಧತೆಯನ್ನು, ಜೊತೆಗೆ ತನ್ನ ತದ್ರೂಪಿತನವನ್ನು ಆಧುನಿಕ ಶೈಲಿಯ ಬದುಕಿಗೆ ಸಭ್ಯಸ್ಥಳಾದ ಮತ್ತು ಅತ್ಯಂತ ಮುಂದುವರೆದ ವಿಚಾರಗಳುಳ್ಳ ಸ್ವಾತಂತ್ರ್ಯ ಮನಸ್ಸಿನ ಮತ್ತು ಡೇರ್ ಡೆವಿಲ್ ಎಂಬಂತಿದ್ದ ಚಂದ್ರ, ಹಳ್ಳೀ ಹುಡುಗನನ್ನು ಮದುವೆಯಾಗಬೇಕಾದ ಸಂದರ್ಭ ಏರ್ಪಟ್ಟಾಗ, ತನ್ನ ಬದಲಾಗಿ ವತ್ಸಲಾಳನ್ನೆ ಕಳಿಸಿಬಿಡುತ್ತಾಳೆ. ಆದರೆ ಹಳ್ಳಿಯಲ್ಲಿದ್ದ ನಾಯಕಿ ವತ್ಸಲಾಳನ್ನೆ ಚಂದ್ರ ಎಂದು ಪೂರ್ತಿಯಾಗಿ ನಂಬಿ, ತನ್ನ ಗೆಳೆಯನ ಸಾವಿಗೆ ಕಾರಣವಾದ ಇವಳನ್ನು ಸೇಡಿನ ಪರಿಣಾಮದಿಂದ ಹಿಂಸಿಸಲು ಮುಂದಾಗುತ್ತಾನೆ. ಆದರೆ ಮುಗ್ಧಳಾದ, ವಿನಯವಂತಳಾದ ವತ್ಸಲಾಳ ಗುಣಕ್ಕೆ. ವ್ಯಕ್ತಿತ್ವಕ್ಕೆ ಸೋತ ನಾಯಕ, ಇವಳು ಅಪರಾಧವನ್ನು ಮಾಡಿರಲಾರಳು ಎಂಬ ನಂಬಿಕೆಯಿಂದ ಅವಳನ್ನು ಪ್ರೀತಿಸಿ ಮದುವೆಯಾಗಲು ಒಪ್ಪುತ್ತಾನೆ. ಆದರೆ ಬೇಡವೆಂದು ನಿರಾಕರಿಸಿದ್ದ ಚಂದ್ರ ತಾನೇ ಮದುವೆಗೆ ಮುಂದಾಗಲು, ನಾಯಕ ಎಲ್ಲವನ್ನು ತಿಳಿದು, ತಾನು ಪ್ರೀತಿಸಿದ ವತ್ಸಲಾಳನ್ನೇ ಹುಡುಕಿ ಮದುವೆಯಾಗುತ್ತಾನೆ. ತೀರಾ ಮಹತ್ವದ ಅಂಶಗಳೇನೂ ಚಿತ್ರದಲ್ಲಿ ಇಲ್ಲದಿದ್ದರೂ ರೂಪದ ಸೌಮ್ಯತೆ ಸ್ವಭಾವದ ಸೌಮ್ಯತೆಯನ್ನು ಹೊಂದಿರಲಾರದು ಎಂಬುದರ ಜೊತೆಗೆ ಸಂಪ್ರದಾಯದ ಮೇಲ್ಮೆಯನ್ನು ಸ್ಥಾಪಿಸುವುದು ಮುಖ್ಯ ಆಶಯವಾಗಿ ಬಂದಿದೆ. ಎರಡು ವಿಭಿನ್ನ ಆಯಾಮಗಳಲ್ಲಿ, ವಿಭಿನ್ನ (ಪರಸ್ಪರ ವಿರುದ್ಧ) ಮನಃ ಸ್ಥಿತಿಗಳಲ್ಲಿ, ವಿಭಿನ್ನ ಶೈಲಿಯ ನಡವಳಿಕೆಯಲ್ಲಿ ಅಭಿನಯಿಸುವುದು ನಿಜವಾಗಿಯೂ ನನಗೊಂದು ಸವಾಲೆ ಆಯಿತು ಎಂಬುದಂತೂ ಸತ್ಯ. ಚಿತ್ರ ಬಿಡುಗಡೆಯಾಗಿ ಪ್ರೇಕ್ಷಕರಿಂದ, ನಿರ್ದೇಶಕರಿಂದ, ನಿರ್ಮಾಪಕರಿಂದ ಉತ್ತಮ ಪ್ರತಿಕ್ರಿಯೆ, ಮೆಚ್ಚುಗೆಯ ಮಾತು ಕೇಳಿ ಬರುವವರೆಗೆ ನನ್ನೊಳಗೆ ಭೀತಿ ಆವರಿಸಿತ್ತು. ಅತ್ಯಂತ ಮಾಡ್ರನ್ ಹುಡುಗಿಯಾಗಿ ಪಾರ್ಟಿಗಳಿಗೆ ಹೋಗುವುದು,



ಕುಡಿಯುವುದು, ಕುಣಿಯುವುದು, ಬೋಲ್ಡಾಗಿ ಗಂಡಸರೊಂದಿಗೆ ಸರಿಸಮಾನವಾಗಿ ಬೆರೆಯುವುದು. ನನ್ನ ಒಂದು ಮುಖವಾದರೆ, ಅದಕ್ಕೆ ತದ್ವಿರುದ್ಧವಾಗಿ ಇನ್ನೊಂದು ಪಾತ್ರದಲ್ಲಿ ತಾಯಿಯಿಲ್ಲದ ಅನಾಥಳಾಗಿ, ಚಿಕ್ಕಮ್ಮನ ಸಿಡುಕಿಗೆ ಬೈಗುಳಗಳಿಗೆ ಹೆದರುತ್ತಾ, ತೀರಾ ಮಡಿವಂತಿಕೆಯ ಮನಸ್ಸಿನೊಂದಿಗೆ ಒಂದು ರೀತಿಯಲ್ಲಿ ಪಾಪದ ಹುಡುಗಿಯಾಗಿ, ಸಹಾನುಭೂತಿ ಮತ್ತು ಅನುಕಂಪಗಳನ್ನು ನಿರೀಕ್ಷಿಸುವ ರೀತಿಯಲ್ಲಿ ನನ್ನ ಸ್ವಭಾವ ನಡವಳಿಕೆಗಳನ್ನು ರೂಪಿಸಿಕೊಳ್ಳಬೇಕಾಗಿತ್ತು. ಇದರಲ್ಲಿ ನನ್ನ ಪಾತ್ರಕ್ಕೆ ತಕ್ಕುದಾದ ವಸ್ತ್ರವಿನ್ಯಾಸವನ್ನು ನಾನೇ ರೂಪಿಸಿಕೊಂಡಿದ್ದೆ.

ಏನಾದರಾಗಲೀ ನನ್ನ ಮುಂದಿದ್ದ ಸವಾಲನ್ನು ನಾನು ಸಮರ್ಥಕವಾಗಿ ಎದುರಿಸಿದೆ. ಸಿನಿಮಾ ಮುಗಿದು ಅದನ್ನು ವೀಕ್ಷಿಸಿದ ಮೇಲೆ ಪುಟ್ಟಣ್ಣಾಜಿ ಅವರು ಭಾವುಕರಾಗಿದ್ದರು. ಅವರಿಗಾದ ತೃಪ್ತಿಯನ್ನು, ಅವರ ಮೆಚ್ಚುಗೆಯ ಮಾತುಗಳಲ್ಲಿ ವ್ಯಕ್ತಪಡಿಸಿದರು. ಈ ಚಿತ್ರ ಅವರಲ್ಲಿ ಸಾರ್ಥಕತೆಯ ಭಾವವನ್ನು ತುಂಬಿತ್ತು. ನನ್ನ ಅಭಿನಯ ಸಾಮರ್ಥ್ಯಕ್ಕೆ ಸಂಪೂರ್ಣ ಶರಣಾಗತರಾದಂತೆ ಮಾತನಾಡುತ್ತಿದ್ದರು. ತಮ್ಮ ಆಪ್ತರೊಂದಿಗೆ ನನ್ನನ್ನು ಕುರಿತು "ನನ್ನ ಇದುವರೆಗಿನ ಚಿತ್ರರಂಗದ ಅನುಭವವನ್ನು ಯಾವುದಾದರೊಂದು ಶಿಲ್ಪದಲ್ಲಿ ಕಡೆಯಬೇಕೆಂಬ ಮಹದಾಸೆಇತ್ತು. ಆ ಯೋಗ್ಯತೆಯನ್ನು ಕಲ್ಪನಾಳಲ್ಲಿ ಗುರುತಿಸಿದೆ. ಆಕೆಗೆ ನನ್ನ ಶಕ್ತಿಯನ್ನು ಧಾರೆ ಎರೆದೆ. ಅವಳು ಅದನ್ನು ಪ್ರೀತಿಯಿಂದ, ಭಕ್ತಿಯಿಂದ

ಸ್ವೀಕರಿಸಿ ನನ್ನ ಕಲ್ಪನೆಯ ಶಿಲ್ಪವಾಗಿದ್ದಾಳೆ. ಅಲ್ಲದೇ ನನ್ನ ಬಗ್ಗೆ ಅತ್ಯಂತ ಕೃತಜ್ಞತಾ ಭಾವ ಇರಿಸಿದ್ದಾಳೆ"-ಎಂದು ಹಾಡಿ ಹೊಗಳಿ ಕೊಂಡಾಡಿದ ವಿಷಯ ನನಗೆ ತಿಳಿದಾಗ ನಿಜವಾಗಿಯೂ ನಾನು ಕೃತಜ್ಞತಾ ಭಾವದಿಂದ ಭೂಮಿಗಿಳಿದು ಹೋದೆ. ಇಂತಹ ಮಹಾನ್ ಚಿತ್ರ ಶಿಲ್ಪಿಯ ಪ್ರೀತಿ, ಅಭಿಮಾನಗಳಿಗೆ ಪಾತ್ರಳಾದವಳಿಗೆ ಜೀವನದಲ್ಲಿ ಮತ್ತೇನೂ ಬೇಡವೆನಿಸಿತು. ಅವರಲ್ಲಿಗೆ ಆಕ್ಷಣವೇ ಓಡಿಹೋಗಿ ನತಮಸ್ತಕಳಾಗಿ ಅವರ ಪಾದಗಳಿಗೆ ಅಶ್ರುಸೇಚನ ಮಾಡಿ ನನ್ನ ಕೃತಜ್ಞತೆ, ವಿನಯಗಳನ್ನು ಅರ್ಪಿಸಬೇಕು ಎನಿಸಿತು. ಇದಾದ ನಂತರವೇ "ಗೆಜ್ಜೆಪೂಜೆ" ಸರಣಿಗೆ ತಿರುಗಿದ್ದು.

ನಿಜವಾಗಿಯೂ ನಾನೊಬ್ಬ ಉತ್ತಮ ಕಲಾವಿದೆಯಾಗಿ ರೂಪುಗೊಂಡದ್ದು ಪಟ್ಟಣ್ಣಾಜಿ ಅವರಿಂದಲೇ.

ಸುಮಾರು ಹದಿನಾರು ವರ್ಷಗಳಲ್ಲಿ 70 ಚಿತ್ರಗಳು ನನ್ನನ್ನು ಅಭಿನೇತ್ರಿಯಾಗಿ ಬಿಂಬಿಸಿದವು. ನಾನು ವಹಿಸಿದ ಪಾತ್ರಗಳು ನನಗೆ ಲೋಕಾನುಭವವನ್ನು ನೀಡಿದವು. ತಾಯಿ, ಮಡದಿ, ಪ್ರೇಯಸಿ, ಮುಗ್ಧಹುಡುಗಿ, ಫ್ಯಾಶನ್ ಹುಡುಗಿ ರೋಗಿಷ್ಟೆ, ತಬ್ಬಲಿ, ಶೋಷಿತೆ-ಹೀಗೆ ಏನೆಲ್ಲಾ ಪಾತ್ರಗಳಲ್ಲಿ ಅಭಿಸಯಿಸುವಾಗ ನಾನೆಲ್ಲೋ ಕಳೆದು ಹೋಗುತ್ತಿದ್ದೆ. ಕಡೆಕಡೆಗೆ ನನಗೊಂದು ಹೆದರಿಕೆ ಶುರುವಾಯಿತು. ಪಾತ್ರಗಳಲ್ಲೇ ಕಳೆದುಹೋಗುತ್ತಿದ್ದರೆ ನಿಜವಾದ ನನ್ನತನ ಎಲ್ಲಿ? ಅದನ್ನು ಹುಡುಕಿಕೊಳ್ಳಲೇಬೇಕು. ಎಲ್ಲವೂ ಆಗಿ ಏನೂ ಆಗದಿದ್ದರೆ?-ಎಂದೆಲ್ಲ ಯೋಚಿಸುತ್ತಿದ್ದೆ. ಸಿನಿಮಾ ಅಭಿನಯ ಒಂದು ರೋಚಕ ಅನುಭವವೇ ಸರಿ! ಬಿಡುವಿನ ವೇಳೆಯಲ್ಲಿ ನಾನು ಮಾಡಿದ ಒಂದೊಂದು ಪಾತ್ರವೂ ಮತ್ತೆ ಮತ್ತೆ ನನ್ನ ಮುಂದೆ ಹಾದು ಹೋಗುತ್ತಿದ್ದವು. ಆ ಸನ್ನಿವೇಶಗಳು ಮನೋಭೂಮಿಕೆಯಲ್ಲಿ ಮರುಕಳಿಸಿದಾಗ, ತೀವ್ರವಾಗಿ ಸ್ಪಂದಿಸುತ್ತಿದ್ದೆ; ಪ್ರತಿಕ್ರಿಯಿಸುತ್ತಿದ್ದೆ. ಬಿದ್ದು ಬಿದ್ದು ನಗುತ್ತಲೂ ಇದ್ದೆ. ಅಂತಹ ಕ್ಷಣಗಳಲ್ಲಿ ಯಾರಾದರೂ ನೋಡಿದ್ದರೆ ಖಂಡಿತವಾಗಿಯೂ ಹುಚ್ಚಿ ಎಂದುಕೊಳ್ಳದೇ ಇರುತ್ತಿರಲಿಲ್ಲ.

ನನ್ನ ಪಾತ್ರದಲ್ಲಿ ಸಂಪೂರ್ಣ ಲೀನವಾಗಿ ಅದನ್ನು ಎಂಜಾಯ್ ಮಾಡುತ್ತಿದ್ದೆ.

ಒದೆರಡು ಚಿತ್ರಗಳಲ್ಲಿನ ನನ್ನ ಅನುಭವವನ್ನು ನಿನಗೆ ಹೇಳಿಕೊಳ್ಳಲೇ ಬೇಕು ಎನಿಸಿದೆ. ಗಂಭೀರ ಪಾತ್ರಗಳ ಇಮೇಜಿನಲ್ಲಿ ಚಲಾವಣೆ ಆಗಿದ್ದ ನಾನು " ಕರುಳಿನ ಕರೆ"ಚಿತ್ರದಲ್ಲಿ ತಮಾಷೆ ಎಂಬಂತೆ, ಪೆದ್ದುಪೆದ್ದಾಗಿ "ಕಳ್ಳೇಕಾಯಿ

ಕಳ್ಳೇಕಾಯಿ" ಹಾಡನ್ನು ಹಾಡಿಕೊಳ್ಳುತ್ತಾ ಪಾರ್ಕಿನಲ್ಲಿ ಕುಳಿತಿದ್ದವರ ಮುಂದೆಲ್ಲಾ ಓಡಾಡುತ್ತಾ ಕಳ್ಳೇಕಾಯಿ ಕೊಳ್ಳಿ ಎಂದು ಹೇಳುತ್ತಿದ್ದುದು ನೆನಪಿಸಿಕೊಂಡಾಗಲೆಲ್ಲಾ ನಗು ಬರುತ್ತದೆ. ಪುಟ್ಟಣ್ಣಾಜಿಯವತು ನಿಜ ಜೀವನದ ಕಥೆಯನ್ನೇ ಸಿನಿಮಾ ಕಥೆಯಾಗಿಸಿದ್ದರು. ಅನಾಥ ಹುಡುಗನಾಗಿದ್ದ ತಮಗೆ ದೊರೆತ ಮಾತೃ ವಾತ್ಸಲ್ಯದ ಅನುಭವ ಇದರ ಹಿಂದಿತ್ತು. ಅನಾಥ ಹುಡುಗನಿಗೆ ಬದಲಾಗಿ ಅನಾಥ ಹುಡುಗಿಯನ್ನು ಸೃಷ್ಟಿಸಿ, ಅದನ್ನು ನನಗೆ ನೀಡಿದರು. ಇನ್ನೊಂದು ಚಿತ್ರವೆಂದರೆ "ನಾರಿ ಮುನಿದರೆ ಮಾರಿ" ಇದರಲ್ಲಿನ ಅನುಭವ ನನಗೆ ನಿಜಕ್ಕೂ ಥ್ರಿಲ್ಲಿಂಗ್ ಆಗಿತ್ತು. ನನ್ನ ಸ್ವಭಾವಕ್ಕೆ, ನನ್ನ ಆಲೋಚನೆಗಳಿಗೆ ತಕ್ಕಂತಹ ಪಾತ್ರ ಇದಾಗಿತ್ತು. ಅನ್ಯಾಯ, ಅಧರ್ಮ ಕ್ರೌರ್ಯ ಹಿಂಸೆಗಳನ್ನು ಹೆಣ್ಣಾದರೂ ಮೆಟ್ಟಿ ನಿಲ್ಲುವಂಥದ್ದು. ಅಳು ಮೋರೆ ಹೆಣ್ಣಿನಂತೆ ಆಗುವ ಅನ್ಯಾಯಗಳನ್ನು ಅಸಹಾಯಕತೆಯಿಂದ ನೋಡುತ್ತಾ ನಿಲ್ಲುವುದಿಲ್ಲ. ಅದನ್ನು ಹತ್ತಿಕ್ಕುವ, ಮತ್ತು ಸಾಮಾಜಿಕ ಅನ್ಯಾಯಕ್ಕೆ, ಗುರಿಯಾಗುತ್ತಿರುವವರಿಗೆಪಾಠ ಕಲಿಸಬೇಕಾದ ಅಗತ್ಯವನ್ನು ನನ್ನ ಪಾತ್ರದ ಮೂಲಕ ಹೇಳುವುದಾಗಿದೆ. ಆದರೆ ಯಾವುದನ್ನೇ ಆಗಲಿ ಏಕಾಂಗಿಯಾಗಿ ಸಾಧಿಸುವುದು ಅಷ್ಟು ಸುಲಭದ ಕೆಲಸವಲ್ಲ. ಮುಳ್ಳಿನಿಂದಲೇ ಮುಳ್ಳನ್ನು ತೆಗೆಯಬೇಕೆಂಬಂತೆ, ಬಲಿಷ್ಟ ಬೆಂಬಲಿಗರ ಜೊತೆಯಾಗಿ ಹೋರಾಡಬೇಕು. ಡಕಾಯಿತರ ಗುಂಪಿಗೆ ಸೇರಿ, ಅವರ ಪಟ್ಟುಗಳನ್ನು, ಕಲಿತು ತಪ್ಪು ಮಾಡುವವರನ್ನು, ದುಷ್ಟರನ್ನು ಶಿಕ್ಷಿಸುವುದಾಗಿತ್ತು. ಅಂದರೆ ನನ್ನ ಒಂದೊಂದು ತಿರುವೂ ಸಾಹಸದ್ದಾಗಿತ್ತು. ಈ ಸಿನಿಮಾದಲ್ಲಿನ ನನ್ನ ಅಭಿನಯವನ್ನೂ, ಸಾಹಸದ ಅಭಿನಯವನ್ನೂ ನೋಡಿದ ಮೇಲೆ ಜನರ ಅಂದರೆ ಚಿತ್ರರಸಿಕರ ದೃಷ್ಟಿಯೇ ಬದಲಾಯಿತು. ಹೊಡೆದಾಟ, ಬಡೆದಾಟ ಸಾಹಸ– ಇವೆಲ್ಲವೂ ಪುರುಷ ಕೇಂದ್ರೀತವಾದ್ದರಿಂದ ನಾಯಕರಿಂದ ಮಾತ್ರವೇ ಇಂಥ ಪಾತ್ರಗಳನ್ನು ಮಾಡಿಸಬೇಕು. ಎಂಬ ನಿಲುವಿನಲ್ಲಿ ಬದಲಾವಣೆ ಬಂತು. ನನ್ನನ್ನು ಈ ಸಾಹಸದ ಪಾತ್ರಗಳಲ್ಲಿ ಮೆಚ್ಚಿ ಒಪ್ಪಿಕೊಂಡದ್ದೆ ಅಲ್ಲದೆ, ಮಹಿಳೆಯರೂ ಇಂತಹ ಪಾತ್ರಗಳನ್ನು ಮಾಡಲು ಸಾಧ್ಯ ಎಂದು ಮನವರಿಕೆ ಮಾಡಿಕೊಂಡರು. ಈ ಎಲ್ಲಾ ಅವಕಾಶಗಳು ನನ್ನೆದೆ ತುಂಬಾ ವಿಶ್ವಾಸ, ಭರವಸೆಗಳನ್ನು ತುಂಬಿದ್ದವು. ಚಿತ್ರ ಜಗತ್ತಿನಲ್ಲಿ ನನಗೆ ಸಾಟಿಯಾಗಲು ಇನ್ನೊಬ್ಬರಿಗೆ ಅವಕಾಶವಿಲ್ಲದಂತೆ ಮುಂದುವರಿಯಬೇಕೆಂದು ಕನಸುಗಳನ್ನು ಕಟ್ಟಿಕೊಂಡು ಆತ್ಮವಿಶ್ವಾಸದಿಂದ ಉಸಿರಾಡುತ್ತಿದ್ದೆ. ಆದರೆ ಆದದ್ದೇನು? ವರುಗಾಲ ಮುಗಿದು ಇಳಿಗಾಲ ಸಮೀಪಿಸುತ್ತಿರಬಹದೇನೋ ಎಂಬ ಸಂದೇಹಕ್ಕೆ ಒಳಗಾದೆ. ನನ್ನನ್ನು ಮೆಚ್ಚಿ ಕೊಂಡಾಡುತ್ತಾ, ತಲೆಯ ಮೇಲಿಟ್ಟುಕೊಂಡವರೇ ಯಾಕೋ ನಿರಾಸಕ್ತರಾಗುತ್ತಿದ್ದರೆಂಬ ಭಾವ! ದೂರ ಸರಿಯುತ್ತಿದ್ದಾರೆಂಬ ಅನುಮಾನ!!

ಎಂಥ ಜಗತ್ತು ಇದು?! ಹೊಸದು ಪ್ರವೇಶವಾಗುತ್ತಿದ್ದಂತೆ ಹಳೆಯದು ಮರೆಯಾಗುತ್ತದೆ. ಹೊಸಬರು ಪ್ರವೇಶಿಸುತ್ತಿದ್ದಂತೆ ಹಳಬರು ನಿರ್ಲಕ್ಷ್ಯಕ್ಕೆ ಒಳಗಾಗುತ್ತಾರೆ. ಇದು ಲೋಕ ಸ್ವಭಾವ. ನಿಜ, ಒಪ್ಪಿಕೊಳ್ಳುತ್ತೇನೆ. ಆದರೆ ಎಂದೆಂದಿಗೂ ಬಿಡಿಸಲಾಗದ ಭಾವನಾತ್ಮಕ ಬೆಸುಗೆಯಾಗಿದ್ದದ್ದೂ ಹೇಗೆ ಮುರಿಯಲು ಸಾಧ್ಯ. ಬೇರೆಯಾಗಲು ಸಾಧ್ಯ?..... ಮನುಷ್ಯನ ಸ್ವಭಾವವೆ ಚಂಚಲ. ತಮ್ಮ ನಿಲುವುಗಳಿಗೆ, ನಂಬಿಕೆಗಳಿಗೆ, ಸಂಬಂಧಗಳಿಗೆ ತಾವೇ ಬದ್ಧರಾಗುವುದಿಲ್ಲಾ. ಪ್ರಬಲ ಸೆಳೆತಗಳು, ಆಕರ್ಷಣೆಗಳು ಎಂತಹವರ ಧೃಢತೆಯನ್ನೂ ಕಂಗೆಡಿಸಬಲ್ಲದು. ಎನ್ನುವ ಅನುಭವ ನನಗಾಗತೊಡಗಿತು.

ನಾನು ಆರಾಧಿಸಿದ, ಪೂಜಿಸಿದ, ಪ್ರೀತಿಸಿದ ನನ್ನನ್ನು ರೂಪಿಸಿದ ರುವಾರಿಎಂದು ಭಾವಿಸಿದ್ದ, ನನಗೆಂದೇ ಚಿತ್ರಗಳನ್ನು ಆಯ್ದು ನಿರ್ದೇಶಿಸಿತ್ತಿದ್ದ, ನಿರ್ಮಿಸುತ್ತಿದ್ದ, ನಿನ್ನಂತಹ ಕಲಾವಿದೆಯೇ ಇಲ್ಲ; ತಮ್ಮೆಲ್ಲ ಕನಸುಗಳನ್ನುತಮ್ಮ ಅಭಿನಯದಲ್ಲಿ ಸಾಕ್ಷಾತ್ಕರಿಸಿದವಳೆಂದು ವೈಭವೀಕರಿಸಿ ಮಾತನಾಡುತ್ತಿದ್ದ ಪುಟ್ಟಣ್ಣಾಜಿ ಅವರಿಗೆ ನಾನು ಬೇಡವಾದದ್ದು ಏಕೆಂದು ಮೊದಲಿಗೆ ಅರ್ಥವಾಗಲಿಲ್ಲ. ಆದರೆ ಕ್ರಮೇಣ ಎಲ್ಲವೂ ಸ್ಪಷ್ಟವಾಗತೊಡಗಿತು. ಚಿತ್ರರಂಗವೆನ್ನುವುದು ತೆರೆದ ಪುಸ್ತಕ. ಪ್ರಸಿದ್ಧರಾದ ನಾಯಕ, ನಾಯಕಿಯರ, ನಿರ್ದೇಶಕರ, ನಿರ್ಮಾಪಕರ ಬದುಕು ನಿಗೂಢವಾಗಿರಲು ಸಾಧ್ಯವೇ ಇಲ್ಲ. ಅವರನ್ನು ಕುರಿತು ಬಹಳ ಬೇಗನೇ, ವದಂತಿಗಳೋ, ವಾಸ್ತವಗಳೋ ಸುದ್ದಿಯಾಗಿ ಎಲ್ಲೆಲ್ಲೂ ಅಡ್ಡಾಡಿ ಬಿಡುತ್ತವೆ. ಹಾಗಾಗಿ ಚಿತ್ರರಂಗದಲ್ಲಿ, ಪುಟ್ಟಣ್ಣನವರ ಬದುಕಿನಲ್ಲಿ ಹೊಸ ಅಭಿನೇತ್ರಿಯಾಗಿ ಆರತಿಯವರ ಪ್ರವೇಶವಾದದ್ದು ಗುಟ್ಟಾಗಿ ಉಳಿಯಲಿಲ್ಲ. ಹೊಸ ಪ್ರತಿಭೆಗಳ ಶೋಧದಲ್ಲಿ ಇರುವ ಅವರಿಗೆ ಆರತಿಯಲ್ಲೂ ಪ್ರತಿಭೆ ಕಂಡಿರಬಹುದು. ಅದಕ್ಕೆ ನನ್ನ ವಿರೋಧವಿಲ್ಲ. ಆದರೆ ಮನಸ್ಸಿನಿಂದ ನನ್ನನ್ನು ದುರವಿರಿಸಿದ್ದು ನನ್ನ ಕಲ್ಪನೆಗೂ ಮೀರಿದ ದುರಂತ ಸತ್ಯವಾಗಿತ್ತು.

ಆರತಿಯವರ ಪ್ರವೇಶವಾದಂದಿನಿಂದ ನಮ್ಮಿಬ್ಬರ ನಡುವೆ ಔಪಚಾರಿಕ ಸ್ನೇಹ ಮಾತ್ರವೇ ಉಳಿದಿತ್ತು. ಮುಂದಿನ ಅವರ ಚಿತ್ರಗ'ಲ್ಲಿ ಪ್ರಧಾನ ಪಾತ್ರಗಳನ್ನು ನಿರೀಕ್ಷಿಸುವುದೂ ದೂರದ ಮಾತಾಗಿತ್ತು. ಹಿಟ್ ಮೂವೀ ಎನಿಸಿಕೊಂಡ 'ನಾಗರಹಾವು' ಚಿತ್ರದಲ್ಲಿ ಅಭಿನಯಿಸಲು ಆಹ್ವಾನಿಸಿ ಅದರಲ್ಲಿ ಯಾವುದೋ ಒಂದು ಸಣ್ಣ ಪಾತ್ರ ಮಾತ್ರ ನೀಡುವ ವಿಚಾರ ನನ್ನ ಮುಂದಿಟ್ಟರು. ಕೆಲವು ನಿಮಿಷಗಳಷ್ಟು ಕಾಣಿಸಿಕೊಂಡು ಮರೆಯಾಗುವ 'ಒನಕೆ ಓಬವ್ವ' ಪಾತ್ರ ನೀಡಲು ಮುಂದಾದಾಗ, ನನಗಾದ ಅವಮಾನದಿಂದ ಒಳಗೇ

ಬೆಂಕಿಯಾದೆ. 'ಅಭಿನಯ ಸಾಮ್ರಾಜ್ಞೆ' ಎಂದು ಮೆರೆಸಿದವಳಿಗೆ, ಹೀಗೆ ಅವಮಾನ ಮಾಡುವುದೇ? ಎಂದಂದುಕೊಂಡು, ಅದನ್ನು ನಿರಾಕರಿಸಿದೆ.

ಸೌಜನ್ಯದಿಂದಲೇ – ಪುಟ್ಟಣ್ಣಾಜಿ, ಮುಂದೆ ನೀವು ಮಾಡುವ ಯಾವುದೇ ಚಿತ್ರಕ್ಕೆ ಆಹ್ವಾನಿಸಿ ಬರುತ್ತೇನೆ. ಇದು ಮಾತ್ರ ನನ್ನಿಂದ ಆಗದು – ಎಂದು ಕ್ಷಮೆ ಯಾಚಿಸಿದೆ. ನನ್ನ ನಿರಾಕರಣೆ ಬಹುಶಃ ಅವರಿಗೆ ಬೇಸರ ಉಂಟು ಮಾಡಿರಬಹುದು. ಅದಕ್ಕೇ 'ಎಡಕಲ್ಲು ಗುಡ್ಡದ ಮೇಲೆ' ಚಿತ್ರದಲ್ಲಿ ಯಾವುದಾದರೂ ಪ್ರಧಾನ ಪಾತ್ರವನ್ನು ನೀಡಬೇಕೆಂದಾಗ ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದರು. ಇಲ್ಲಿಗೆ ನಮ್ಮ ಸಂಬಂಧ, ಸ್ನೇಹಕ್ಕೆ ವಿದಾಯವಾಗುತ್ತದೆಯೇನೋ ಎನಿಸಿತು.

ಎಷ್ಟೋ ಹಗಲು ರಾತ್ರಿಗಳು ಈ ಕಹಿ ಪ್ರಸಂಗವನ್ನೇ ನೆನಪಿಸುತ್ತಾ ಕಾಡಿದವು.

ನನಗೆ ಗಾಡ್‌ಫಾದರ್ ಆಗಿ ನನ್ನನ್ನು ಎತ್ತರಕ್ಕೆ ಏರಿಸಿದ ವ್ಯಕ್ತಿ ಇನ್ನು ಮುಂದೆ ನನಗೆ ಲಭ್ಯವಿಲ್ಲ. ನನ್ನ ಪ್ರತಿಭೆ. ಅಭಿನಯ ಸಾಮರ್ಥ್ಯಗಳನ್ನು ಮರೆಯದೆ ಕರೆಯುವ ಮಂದಿ ಚಿತ್ರರಂಗದಲ್ಲಿ ಇದ್ದರೆ ಮಾತ್ರ ನನಗೆ ಅವಕಾಶಗಳು!

ನನ್ನ ವರ್ಚಸ್ಸು ಕಡಿಮೆಯಾಗುತ್ತಿದ್ದದ್ದು ನನಗೇ ಅನುಭವಕ್ಕೆ ಬರುತ್ತಿತ್ತು. ನನ್ನ ಅಳಿವು – ಉಳಿವಿನ ಸಮಸ್ಯೆ ಭೂತಾಕಾರವಾಗಿ ನನ್ನನ್ನು ಕಾಡತೊಡಗಿತ್ತು. ಇದೇ ಸಮಯಕ್ಕೆ ನಾಯಕ ಪ್ರಧಾನ ಚಿತ್ರಗಳದೇ ಭರಾಟೆ. ಚಿತ್ರ ಜಗತ್ತಿನ ಮಹಾನ್ ನಟರೆಂದು ಗುರುತಿಸಿಕೊಂಡಿದ್ದ ರಾಜಕುಮಾರ್‌ರವರವರಿಗೊಂದೇ ಚಿತ್ರಗಳು ನಿರ್ಮಾಣವಾಗುತ್ತಿದ್ದವು. ಹೀಗಿರುವಾಗ ಪ್ರಧಾನ ಪಾತ್ರಗಳು ಸವಾಲೆನಿಸುವ ಪಾತ್ರಗಳು ನನ್ನ ಪಾಲಿಗೆ ಬರುವುದು ಸಾಧ್ಯವೇ ಇರಲಿಲ್ಲ.

ಈಗ ನನ್ನ ಮುಂದೆ ಇದ್ದದ್ದು ಕೇವಲ ಎರಡೇ ಎರಡು ಆಯ್ಕೆಗಳು. ಯಾವುದೇ ಪಾತ್ರಕ್ಕೆ ಆಹ್ವಾನ ಬಂದರೂ ಒಪ್ಪಿಕೊಳ್ಳುವುದು ಇಲ್ಲವೇ ಚಿತ್ರರಂಗದಿಂದಲೇ ನಿರ್ಗಮಿಸುವುದು. ಯೋಚಿಸಿದಷ್ಟೂ ನಿರ್ಧಾರ ಜಟಿಲವಾಗುತ್ತಲೇ ಇತ್ತು. ಕಡೆಗೆ ನಿರ್ಗಮನವೆಂದರೆ ಸೋಲನ್ನು ಒಪ್ಪಿಕೊಂಡಂತೆ. ಅದಕ್ಕಾಗಿ ನನ್ನ ಪಾಲಿಗೆ ಬರುವ ಯಾವುದನ್ನೂ ಬಿಡದೆ ನನ್ನ ಶಕ್ತಿ, ಸಾಮರ್ಥ್ಯಗಳನ್ನು ಅದರ ಮಿತಿಯಲ್ಲಿಯೇ ತೋರಿಸುವುದು – ಎಂದು ನಿರ್ಧಾರದ ಹಂತಕ್ಕೆ ಬಂದೆ. ರಾಜಕುಮಾರ್ ಜೊತೆ ಅಭಿನಯಿಸುವ ಅವಕಾಶವೂ ನನಗೆ ಸಿಕ್ಕಿತು. 'ಗಂಧದ ಗುಡಿ' 'ದಾರಿ ತಪ್ಪಿದ ಮಗ' 'ಎರಡು ಕನಸು'– ಹೀಗೆ ರಾಜಕುಮಾರ್ ಅವರ ಸರಣಿ ಚಿತ್ರಗಳಲ್ಲಿ ನಾಯಕಿ ಪಾತ್ರಗಳೇ

ದೊರೆತರೂ ಅವು ಅಭಿನಯಕ್ಕೆ ಸ್ಕೋಪೇ ಇಲ್ಲದ ಪಾತ್ರಗಳಾಗಿದ್ದವು. ಒಂದೆರಡು ದೃಶ್ಯಗಳಲ್ಲಿ ಕಾಣಿಸಿಕೊಳ್ಳುವುದೋ, ಮಾತೇ ಇಲ್ಲದ ಮೌನ ಗೌರಿಯಂತೆಯೋ, ಅನಾಮಧೇಯವಾಗಿ, ನಾಯಕನ ಜೀವನದ ತೆರೆಯ ಹಿಂದಿನ ಅಜ್ಞಾತವಾಗಿ ಉಳಿಯುವ ಪತ್ನಿ ಪಾತ್ರದಲ್ಲಿಯೋ ನನ್ನ ಸೀಮಿತತೆಯಿತ್ತು. ಇದ್ದುದರಲ್ಲಿ 'ಎರಡು ಕನಸು' ಚಿತ್ರದಲ್ಲಿ ನನ್ನ ಅಭಿನಯಕ್ಕೆ ಒಂದಿಷ್ಟು ಚಪ್ಪಾಳೆಗಿಟ್ಟಿತು. ಮುಂದೆ 'ಬಯಲು ದಾರಿ' 'ನಾ ಮೆಚ್ಚಿದ ಹುಡುಗ' ಎಲ್ಲಾ ಚಿತ್ರಗಳಂತೆ ತೆರೆಕಂಡು ಮರೆಯಾದವು.



ಪ್ರಮುಖ ಪಾತ್ರಗಳಲ್ಲಿ ಮೆರೆದ ನಾನು ಹೀಗೆ ಕಾಣಿಸಿಕೊಂಡು ಮರೆಯಾಗುವ ಪಾತ್ರಗಳಲ್ಲಿ ಅಭಿನಯಿಸಬೇಕಾದ ಅನಿವಾರ್ಯತೆಗೆ ನನ್ನನ್ನು ನಾನೇ ಹಳಿದುಕೊಂಡೆ. ಆದರೆ ವಿಧಿಯಿಲ್ಲ. ಎತ್ತರಕ್ಕೇರಿದವರು ಇಳಿಯಲೇ ಬೇಕು. ಜೀವನವೆಂಬ ಕಡಲಿನಲ್ಲಿ ಏರಿಳಿತಗಳು ಸಹಜ ಸ್ವಾಭಾವಿಕ. ಚಿತ್ರ ಜಗತ್ತನ್ನು ಗಮನಿಸಿದಾಗ ಪ್ರಮುಖ್ಯತೆ, ಪ್ರಾಧಾನ್ಯತೆಗಳು ಎಂದೆಂದಿಗು ಶಾಶ್ವತವಲ್ಲ. ಮಹಾಮಹಾನಟರೆಲ್ಲ ಕಡೆಗಾಲದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿ ದುರ್ದಿನಗಳನ್ನು ಕಳೆದದ್ದಿಲ್ಲವೇ? ಬೇಡಿಕೆ ಕಡಿಮೆಯಾಯಿತೆಂದು ಸುಮ್ಮನಿರುವುದು ಸರಿ ಅಲ್ಲ. ಹೇಗಿದ್ದರೂ ಷೋ ಮಸ್ಟ್ ಗೋ ಆನ್. ಏನೇನೋ ಚಿತ್ರಗಳು, ಏನೇನೋ ಪಾತ್ರಗಳು. ಪೋಷಕ ಪಾತ್ರಗಳನ್ನೂ ಒಪ್ಪಿಕೊಂಡೆ. ಬೇಡಿಕೆ ಕಡಿಮೆಯಾಗುತ್ತಿದ್ದಂತೆ, ನನಗಿದ್ದ ಸಾಹಿತ್ಯ ಪ್ರೀತಿಯಿಂದ ಒಳ್ಳೊಳ್ಳೆ ಸಾಹಿತ್ಯ ಕೃತಿಗಳನ್ನು ಅಭ್ಯಾಸ ಮಾಡತೊಡಗಿದೆ. ಹೊಸ ಅಲೆಯ ಸಿನಿಮಾಗಳು ಸಾಹಿತ್ಯಾಸಕ್ತರನ್ನು ಸಿನಿಮಾಸಕ್ತರನ್ನು ಏಕಕಾಲದಲ್ಲಿ

ಸೆಳೆದುಕೊಂಡವು. ಶಿವರಾಮ ಕಾರಂತರ ಕಾದಂಬರಿಗಳು ಚಲನಚಿತ್ರಗಳಾಗಿ ಬಂದವು. ಇದೇ ಸಮಯದಲ್ಲಿ ಚಿತ್ರರಂಗದಲ್ಲಿಯೂ ಬಿ.ವಿ. ಕಾರಂತ, ಗಿರೀಶ್‌ಕಾರ್ನಾಡ್‌ರ ಹೆಸರುಗಳು ಸಾಕಷ್ಟು ಕೇಳಿಬರುತ್ತಿದ್ದವು. ಕಾರಂತರು ಅಂತರರಾಷ್ಟ್ರೀಯ ಮಟ್ಟದ ರಂಗ ತಜ್ಞರು. ಅಪ್ರತಿಮ ಪ್ರತಿಭಾವಂತ ನಿರ್ದೇಶಕರು. ಕಾರ್ನಾಡರೋ ಕನ್ನಡದ ಹೆಸರಾಂತ ನಾಟಕಕಾರರು. ಇವರೆಲ್ಲ ಕಮರ್ಷಿಯಲ್



ಚಿತ್ರಗಳಿಗಿಂತ ಭಿನ್ನವಾದ ನೆಲೆಯಲ್ಲಿ ಚಲನಚಿತ್ರ ಮಾಧ್ಯಮದ ಸಾಧ್ಯತೆಗಳ ಅನುಭವಕ್ಕಾಗಿ ಕೆಲವೊಮ್ಮೆ ಹಾತೊರೆದದ್ದುಂಟು. ಆದರೆ ನನ್ನ ದುರಾದೃಷ್ಟ. ಅವಕಾಶಗಳಿಗೆ ಹಾತೊರೆಯುತ್ತಿದ್ದಾಗ, ಅವು ನನ್ನಿಂದ ದೂರ ಸರಿಯುತ್ತಿದ್ದವು.

ಮನಸ್ಸಿನಲ್ಲಿ ಅವ್ಯಕ್ತ ಭೀತಿ. ಅಮ್ಮ ಚಿಕ್ಕಮ್ಮ ಚಿಕ್ಕಪ್ಪ ತಮ್ಮ, ನನ್ನ ಗೆಳತಿಯರು ನನ್ನ ಸಂಕಟವನ್ನು ಗಮನಿಸುತ್ತಿದ್ದರು. ಹೇಗೆ ನನಗೆ ಸಮಾಧಾನ ಹೇಳಬೇಕೋ ತಿಳಿಯದೆ ಚಡಪಡಿಸುತ್ತಿದ್ದರು. ನನ್ನ ಸಮಾಧಾನಕ್ಕಿದ್ದ ಒಂದೇ ಒಂದು ದಾರಿ. ನನ್ನ ಖಾಸಗಿ ಗ್ರಂಥಾಲಯದಲ್ಲಿ ಪುಸ್ತಕಗಳಲ್ಲಿ ಅಡಗಿಕೊಳ್ಳುವುದಾಗಿತ್ತು. ಹಗಲು ರಾತ್ರಿಗಳ ಪರಿವೆಯಿಲ್ಲದಂತೆ ದೆವ್ವದ ಹಾಗೆ ಕುಳಿತು ಓದುತ್ತಿದ್ದೆ. ಗಂಟೆಗಟ್ಟಲೆ ಕುಳಿತು ಪೂಜೆ ಮಾಡುವ ಮನೋಧರ್ಮ ನನ್ನದಲ್ಲವಾದರೂ, ನನ್ನ ನೆಮ್ಮದಿಗಾಗಿ ಭಗವದ್ಗೀತೆ, ರಾಮಾಯಣ ಮಹಾಭಾರತಗಳನ್ನು ಓದಿದೆ. ಕುದಿ ಮನದ ಸಾಂತ್ವನಕ್ಕಾಗಿ ಮಂಕುತಿಮ್ಮನ ಕಗ್ಗ ಓದಿದೆ. ಇದಂತೂ ನನ್ನ ದೇಹ. ಮನಸ್ಸಿಗೆ ಭಾಗವಾಗಿ ನನ್ನೊಡನೆಯೇ ಇರುತ್ತಿತ್ತು. ಭಾವೋದ್ವಿಗ್ನ ಸ್ಥಿತಿಯಲ್ಲಿ ಸಾಂತ್ವನ ನೀಡಲು ಯಾರಾದರೂ ಒಬ್ಬರಾದರೂ ಸಿಗಬಾರದಾಗಿತ್ತೇ? ನನಗೂ

ಎಲ್ಲರಂತೆ ಗಂಡ, ಮಕ್ಕಳು, ಸಂಸಾರ ಎನ್ನುವ ಭಾಗ್ಯ ಬರಬಾರದೇ? ನಮ್ಮೆಲ್ಲ ಆಸೆ ಕನಸುಗಳನ್ನು ನೆಚ್ಚಿಕೊಂಡು, ಅವಲಂಬಿಸಿ ಪ್ರೀತಿಸುವ ಗಂಡಸರೇಕೆ ಮೋಸ ಮಾಡುತ್ತಾರೆ. ಪ್ರೀತಿಸುವ ಹೆಣ್ಣಿನ ಬಗ್ಗೆ ನಿಯತ್ತು ಬೇಡವೇ? ಅವನ ಅಹಂಕಾರದ ಅಧ್ವರ್ಯುತನದಲ್ಲಿ ಹೆಣ್ಣು ರಸಾತಳಕ್ಕೆ ಹೋದಂತಾಗಬೇಕೆ? ನಮ್ಮನ್ನು ಮನುಷ್ಯರು, ನಮಗೂ ಮನಸ್ಸು ಇರುತ್ತದೆ. ಎಂದೇಕೆ ತಿಳಿಯುವುದಿಲ್ಲ? ಅವರು ಹೆಣ್ಣುಗಳ ಬೋಳೆತನವನ್ನು, ಭಾವನಾತ್ಮಕತೆಯನ್ನು ಬಂಡವಾಳ ಮಾಡಿಕೊಂಡು. ನಮ್ಮೆದೆ ತುಂಬಾ ಪೊಳ್ಳು ಆಸೆ, ಭರವಸೆಗಳ ಕಿಡಿಹೊತ್ತಿಗೆ ತಣ್ಣಗೆ ಮರೆತು ಬಿಡುತ್ತಾರೆ. ತಮಗೆ ಬೇಕಾದ್ದೆಲ್ಲ ದೊರೆತ ಮೇಲೆ ನಮ್ಮಂಥ ಹುಂಬರನ್ನು ನಂಬಿಸಿದ್ದಕ್ಕೆ ತಮ್ಮೊಳಗೆ ತಾವೇ ಹಿಗ್ಗುತ್ತಾರೆ. ಅದ್ದರಿಂದಲೇ ಅವರನ್ನು ಪೂರ್ತಿಯಾಗಿ ನನ್ನ ವಶವರ್ತಿಯಾಗಿ, ನನಗೆ ಮೀಸಲಾಗಿ ನನ್ನ ಪ್ರೀತಿ, ಯೋಗಕ್ಷೇಮಗಳಷ್ಟೇ ಮುಖ್ಯವಾಗಿಸಿಕೊಳ್ಳಬಲ್ಲ ಸಂಗಾತಿಯನ್ನು ನಿರೀಕ್ಷಿಸಿದೆ. ಇದರ ಹಿಂದಿನ ನನ್ನ ಮನಸ್ಸು ಯಾರಿಗೂ ಅರ್ಥವಾಗಿರಲಿಕ್ಕಿಲ್ಲ. ಅದನ್ನು ಪುರುಷನ ಮೇಲಿನ ಬಾಸಿಂಗ್‌ನೇಚರ್ ಎಂದು ಅರ್ಥೈಸಿ, ಟೀಕಿಸಿದರೆ ನಾನೇನು ಮಾಡಬಲ್ಲೆ! ದೈವದ ಸಮಕ್ಷಮದಲ್ಲಿಯೇ ನನ್ನನ್ನು ಚಿತ್ರರಂಗದಲ್ಲಿ ಮೇರುವಿನ ಶಿಖರಾಗ್ರಕ್ಕೆ ಕೊಂಡೊಯ್ಯುತ್ತೇನೆ;- ಎಂದು ವಾಗ್ದಾನ ಮಾಡಿದವರೇ ಮುಂದಿನ ತಮ್ಮ ಚಿತ್ರಗಳಿಂದ ನನ್ನನ್ನು ದೂರವಿರಿಸಿದರು. 'ಶರಪಂಜರ'ವೇ ಆ ಮಹಾನುಭಾವನಿಂದ ನನಗೆ ದೊರೆತ ಕಟ್ಟಕಡೆಯ ಚಿತ್ರ. ನಾನು ಬೇಡವಾಗಲು ಕಾರಣ ಏನೇ ಇರಬಹುದು. ಆದರೆ ನನ್ನ ಕಲಾ ಪ್ರತಿಭೆ, ಅಭಿನಯ ಸಾಮರ್ಥ್ಯಗಳನ್ನೇಕೆ ನಿರ್ಲಕ್ಷಿಸಬೇಕು? ಕೊಟ್ಟ ಮಾತನ್ನೇಕೆ ಭ್ರಷ್ಟಗೊಳಿಸಬೇಕು? ಇಷ್ಟು ಆತ್ಮೀಯರಾದವರಿಂದಲೇ ನಿರ್ಲಕ್ಷ್ಯ ನಿರಾಕರಣೆಯ ಅವಮಾನವಾದರೆ ಹೇಗೆ ಸಹಿಸಕೊಳ್ಳಬೇಕೋ ನನ್ನ ಆತ್ಮಾಭಿಮಾನ, ಆತ್ಮ ಗೌರವಗಳಿಗೆ ಬೆಲೆ ಇಲ್ಲವೇ? ಎಂಥೆಂಥಾ ಜನ ಈ ಸಿನೀಲೋಕದಲ್ಲಿ ಇದ್ದಾರೆ! ಚಿತ್ರರಂಗವೇ ಬೇಡ ಎನ್ನುವ ನಿಲುವಿಗೆ ಬಂದಿದ್ದೆ. ಆದರೆ ಆಕಸ್ಮಿಕವೋ ಎಂಬಂತೇ 'ಸಂದರ್ಭ' ಚಿತ್ರದಲ್ಲಿ ಅಭಿನಯಿಸುವ ಅವಕಾಶ ಗೌರಿಸುಂದರ್ ಅವರಿಂದ ದೊರೆಯಿತು. ಇವರು ನಾನು ಕಂಡ ಹಲವಾರು ವ್ಯಕ್ತಿಗಳಿಗಿಂತ ಭಿನ್ನರಾಗಿ ಕಂಡಿದ್ದಾರೆ. ಬಹಳ ಸಾಹಸಿ, ಸ್ನೇಹಮಯಿ, ಉತ್ಸಾಹಶೀಲರು. ತಿಮಿಂಗಿಲಗಳಂಥ ನಿರ್ದೇಶಕರಿದ್ದರು. ಅವರ ನಡುವೆಯೂ ಎದ್ದು ಕಾಣುವ ರೀತಿಯಲ್ಲಿ ಮಾತು. ನಡೆ, ಬಹಳ ಓಪನ್ ಮೈಂಡೆಡ್. ಒಂದೆರಡು ಬಾರಿ ಪರಿಚಯವಾಗಿತ್ತು. ಒಂದು ಬಗೆಯ ಹಿಂಜರಿಕೆಯಿಂದಲೇ ನನ್ನನ್ನು ಆ ಚಿತ್ರಕ್ಕೆ ಆಹ್ವಾನಿಸಿದರು. ಕತೆ ಕೇಳಿದೆ. ನನಗೆ ಅದ್ಭುತ ಅಂತ

ಅನ್ನಿಸಿತು. ಅದೂ ಕೂಡಾ ಒಂದು ರೀತಿಯಲ್ಲಿ ಸೈಕಾಲಾಜಿಕಲ್ ಮೂವಿ. ಅಕ್ಕ-ತಂಗಿಯ ಕತೆ. ಅಕ್ಕ ಕಲ್ಪನಾ ಜಗತ್ತಿನಲ್ಲಿಯೇ ತನ್ನೆಲ್ಲ ಬದುಕನ್ನು ರೂಪಿಸಿಕೊಳ್ಳುತ್ತಾ ಹೋದರೆ ತಂಗಿ ತುಂಬಾ ಪ್ರಾಕ್ಟಿಕಲ್. ವೈಜ್ಞಾನಿಕ ಮನಸ್ಸು. ಅವಳಿಗೆ ವಾಸ್ತವವಷ್ಟೇ ಸತ್ಯ. ನಾಯಕ ಮನಶಾಸ್ತ್ರದ ಪ್ರೊಫೆಸರ್ ಅಕ್ಕ ಪ್ರೊಫೆಸರ್‌ನನ್ನು ಬಯಸಿ. ಮನದಲ್ಲಿಯೇ ಆರಾಧಿಸಿ ಭವ್ಯವಾದ ಬದುಕನ್ನು ಕಟ್ಟಿಕೊಳ್ಳುತ್ತಾ, ಮನೋರಂಗದಲ್ಲಿ ಅವನ ಸಾಂಗತ್ಯದ ಸಂಭ್ರಮವನ್ನು ಅನುಭವಿಸುತ್ತಿದ್ದರೂ ಅವಳು ಪ್ರೀತಿಸುವ ಪ್ರೊಫೆಸರ್‌ಗೆ ಅವಳ ತಂಗಿಯ ಮೇಲೆ ಪ್ರೀತಿ. ಪ್ರಾಕ್ಟಿಕಲ್ ಆದ ತಂಗಿ, ಅಕ್ಕನ ಹುಚ್ಚು ಕನಸುಗಳನ್ನು ಅವಳ ಭ್ರಮೆಯನ್ನು ಸ್ಫೋಟಿಸಿ, ಅವಳೂ ಕೇವಲ ಬಲಿ ಪಶುವಷ್ಟೇ ಎಂಬುದನ್ನು ಹೇಳಿರುತ್ತಾಳೆ. ಆದರೆ ಪ್ರೊಫೆಸರನಿಂದಲೇ, ತನ್ನನ್ನು ಸ್ನೇಹಿತೆಯಾಗಿ ಭಾವಿಸಿರುವುದಾಗಿಯೂ, ಎಂದಿಗೂ ಅವಳನ್ನು ಪ್ರೀತಿಸಿಲ್ಲವೆಂಬ ಸತ್ಯದ ಅರಿವಾದಾಗ, ಮಾನಸಿಕ ಆಘಾತಕ್ಕೆ ಒಳಗಾಗುತ್ತಾಳೆ. ಇಲ್ಲಿ ನೇರವಾಗಿ ಪಾತ್ರಗಳು ಸಂಭಾಷಣೆಗಳಿಂದ ಕಥೆಯನ್ನು ಕಟ್ಟಿಕೊಡುವುದಕ್ಕಿಂತ, ದೃಶ್ಯಗಳ ಮೂಲಕ ಸಾಂಕೇತಿಕತೆಯ ತಂತ್ರದಿಂದ ಇಡೀ ಚಿತ್ರದ ಅನಾವರಣ ಆಗುತ್ತದೆ. ನನ್ನ ಪಾತ್ರ ಅದರಲ್ಲಿ "ಕಾದಂಬರಿಕಾರ್ತಿ"ಯಾಗಿ. ಹಣಕಾಸಿನ ವಿಚಾರದಲ್ಲಿ ತೊಂದರೆಯಾಗಿ ನಾಯಕಿ "ಡಬ್" ಸಂದರ್ಭದಲ್ಲಿ ಕೈಕೊಟ್ಟಾಗ, ಪಾಪ ತುಂಬಾ ವಿನಯವಾಗಿಯೇ ನನ್ನನ್ನು ಇದರಲ್ಲಿ ಭಾಗವಹಿಸಲು ಕೇಳಿಕೊಂಡಿದ್ದರು. ಕತೆಯ ಅನನ್ಯತೆ, ನಿರೂಪಣೆಯ ತಂತ್ರಗಾರಿಕೆ, ನಿರ್ದೇಶನದ ಕೌಶಲ್ಯ ಇವೆಲ್ಲವೂ ನನಗೆ ತುಂಬಾ ಹಿಡಿಸಿತು. ನಾನು ಕಥಾನಿರೂಪಣೆಯ ಮೂಲಕ ನಾಯಕಿಯನ್ನು ಪರಿಚಯಿಸುವುದಾಗಿತ್ತು. ಕಾದಂಬರಿಕಾರ್ತಿಯಾಗಿ ನಿಜ ಜೀವನದಲ್ಲಿ ಸಾಧ್ಯವಾಗದಿದ್ದರೂ, ಪಾತ್ರದ ಮೂಲಕ ನನ್ನನ್ನು ನಾನು ತ್ರಿವೇಣಿಯಾಗಿ ಭಾವಿಸಿಕಂಡೆ. ನಾನು ಆ ಪಾತ್ರದೊಂದಿಗಿನ ತಲ್ಲೀನತೆಯಿಂದಾಗಿ, ಎಲ್ಲಿಂದ ನನಗೆ ಸ್ಫೂರ್ತಿ ಬಂತೋ ತಿಳಿಯಲಿಲ್ಲ. ಎಲ್ಲೆಲ್ಲಿ ಅವಶ್ಯಕತೆಯಿದೆಯೋ ಅಲ್ಲೆಲ್ಲ ನನ್ನದೇ ಧ್ವನಿಯಲ್ಲಿ ಸಂಭಾಷಣೆಗಳನ್ನು ನೀಡಿದೆ. ನನಗೆ ಇದು ಅತ್ಯಂತ ರೋಮಾಂಚನಕಾರಿಯಾದ ಅನುಭವವಾಗಿತ್ತು. ನಿಜವಾಗಿ ಹೇಳುವುದಾದರೆ ಇದೊಂದು ಮೈಂಡ್ ಬ್ಲಾಗಿಂಗ್ ಚಿತ್ರವಾಗಿತ್ತು. ಸುಲಭದಲ್ಲಿ, ಆ ಚಿತ್ರದಲ್ಲಿ ಬರುವ ಸಾಂಕೇತಿಕ ಷಾಟ್‌ಗಳನ್ನು ಅರ್ಥಮಾಡಿಕೊಳ್ಳಲು ಸಾಮಾನ್ಯರಿಗೆ ಸಾಧ್ಯವಿರಲಿಲ್ಲ. ಇನ್ನೊಂದು ಈ ಚಿತ್ರದ ಮಹತ್ವದ ಅಂಶ, ಸಂಭಾಷಣೆಗಳ ಗದ್ದಲಕ್ಕಿಂತ, ಮೌನ! ಮೌನದ ಸೌಂಡ್ ಈಸ್ ದಿ ಕ್ಲೈಮ್ಯಾಕ್ಸ 'ಮೂಲಕವೇ ಚಿತ್ರಕ್ಕೆ ಅರ್ಥಮಹತ್ವವನ್ನು ಹೆಚ್ಚಿಸುವ ಪ್ರಯತ್ನವಾಗಿತ್ತು. ಸೈಲೆನ್ಸ

ಈಸ್ ಮೋರ್ ಪವರ್ ಫುಲ್ ಅಂಡ್ ಮೀನಿಂಗ್ ಫುಲ್ ಅಂಡರ್ ಮೀನಿಂಗ್ ಫುಲ್ ವರ್ಡ್ಸ್ ಎನ್ನುವುದು ಈಚಿತ್ರದ ಸಂದರ್ಭದಲ್ಲಿ ನಿಜವಾಗಿತ್ತು. ಮಲ್ಲೇಶ್ವರದಲ್ಲಿ, ಸದಾಶಿವನಗರದಲ್ಲಿ ಒಂದು ಸಣ್ಣ ಮನೆಯಲ್ಲಿ ಷೂಟಿಂಗ್ ನಡೆಯುವಾಗ ಸೇರಿದ್ದ ದೊಡ್ಡ ಸಮೂಹ ನನ್ನನ್ನು ಚಕಿತಗೊಳಿಸಿತು. ಗೌರಿಸುಂದರ್ ಅವರ ಆತ್ಮೀಯ ಸ್ನೇಹಿತರ ಒಂದು ದೊಡ್ಡ ದಂಡೇ ಇತ್ತು. ಸಿನಿಕಲಾವಿದರು, ಸಾಹಿತಿಗಳು, ಪತ್ರಕರ್ತರು, ರಂಗ ಕಲಾವಿದರು, ನಿರ್ಮಾಪಕರು



ಮುಂತಾಗಿ ಇನ್ನೂ ಹಲವರು ಮಂದಿ ಇದ್ದರು. ಅವರ ಸ್ವಭಾವ, ಸ್ನೇಹಗಳಿಂದ ಮುಗ್ಧಳಾಗಿದ್ದದೇ ಅಲ್ಲದೇ ನಾನು ಆಂತರ್ಯದಲ್ಲಿ ಆಗಬೇಕೆಂದಿದ್ದ ಕಾದಂಬರಿಕಾರ್ತಿಯಾಗಿ ಸೃಜನಶೀಲ ಕ್ರಿಯೆಯ ಅನುಭೂತಿಗೆ ಅವಕಾಶ ಕಲ್ಪಿಸುವುದರ ಜೊತೆಗೆ ಆ ಚಿತ್ರದ ಕತೆಯೂ ಮೆಚ್ಚಿಗೆಯಾಗಿ, ಖುಷಿಗಾಗಿ ಮಾಡಬೇಕೆನಿಸಿದ್ದರಿಂದ ಅವರು ನೀಡಲು ಮುಂದಾದ ಸಂಭಾವನೆಯನ್ನು ಸೌಜನ್ಯದಿಂದಲೇ ನಿರಾಕರಿಸಿದೆ. ಇದರಲ್ಲಿ ನನ್ನ ದೊಡ್ಡಸ್ತಿಕೆಯೇನೂ ಇಲ್ಲದಿದ್ದರೂ ನನ್ನಂಥ ಹಿರಿಯ ಕಲಾವಿದೆ ಸಂಭಾವನೆಯನ್ನೇ ತೆಗೆದುಕೊಳ್ಳದೇ ಹೋದದ್ದು, ನನ್ನ ದೊಡ್ಡತನವೆಂದೇ ಕೊಂಡಾಡಿದ್ದು ಅವರ ದೊಡ್ಡತನಕ್ಕೆ ಸಾಕ್ಷಿಯಾಗಿತ್ತು.

ಇದಾದ ಮೇಲೂ ಗೌರಿಸುಂದರ್ ಅವರ ಭೇಟಿ ಅಗಾಗ ಸಭೆ ಸಮಾರಂಭಗಳಲ್ಲಿ ಆಗುತ್ತಿತ್ತು. ನನ್ನಂತೆ ಅವರೂ ಬಹಳ ಫ್ರಾಂಕ್. ಪರಿಚಯ ಸ್ನೇಹವಾಗಿ, ಸ್ವಲ್ಪ ಹತ್ತಿರವಾದಾಗ, ನನ್ನ ವಿಚಾರದಲ್ಲಿ ಅಲ್ಲಿ ಇಲ್ಲಿ ಕೇಳಿಸಿಕೊಂಡಿದ್ದ ಮಾತುಗಳ ಬಗ್ಗೆ ಪ್ರಸ್ತಾಪ ಮಾಡಿದರು. ಅಲ್ಲದೇ ತಮ್ಮ ಚಿತ್ರಕ್ಕೆ ಆಹ್ವಾನಿಸಲು

ಹೆದರಿದ್ದ ಕಾರಣವನ್ನೂ ತಿಳಿಸಿದರು. ಅವರು ಬಾಯಿ ಬಿಟ್ಟು ಹೇಳದಿದ್ದರೂ ಏನೇನು ಹೇಳಿರಬಹುದೆಂಬುದನ್ನು ಊಹಿಸಿದ್ದೆ. ಆದರೂ ಕೇಳಿದೆ. ಮುಜುಗರದಿಂದಲೇ ಹೇಳಿದರು. "ಕಲ್ಪನಾ ಅವರೆ ನೀವು ತಪ್ಪು ತಿಳಿಯಬಾರದು. ನಾನು "ಸಂದರ್ಭ" ಚಿತ್ರದ ಬಗ್ಗೆ ಯೋಚಿಸಿದಾಗ, ನನಗೆ ಮೊಟ್ಟ ಮೊದಲಿಗೆ ಹೊಳೆದದ್ದು ನಿಮ್ಮ ಹೆಸರೇ! ಆದರೆ ನೀವು ಸೆಟ್ ಮೇಲೆ ಇದ್ದಾಗ ಕೋ-ಆಪರೇಟ್ ಮಾಡೊಲ್ಲ; ಟೈಂ ಕೀಪಪ್ ಮಾಡೊಲ್ಲ. ಹೊಸ ಡೈರೆಕ್ಟರ್ ಅಂದರೆ ನೀರು ಕುಡಿಸುತ್ತಾರೆ. ಅಲ್ಲದೆ ಹೊಸ ನಟರ ಜೊತೆಗೇಂದ್ರೆ, ಅಭಿನಯಿಸಲು ಸುತರಾಂ ಒಪ್ಪೊಲ್ಲ. ಅವರದು ಒಂಥರಾ ದುರಹಂಕಾರ; ಶ್ರೀಮಂತಿಕೆಯ ಸೊಕ್ಕು" ಎಂದೆಲ್ಲ ಹೇಳಿದ್ದರಿಂದ ನಾನು ಹೆದರಿ ನಿಮ್ಮನ್ನು ಆಹ್ವಾನಿಸಲು ಬಂದಿರಲಿಲ್ಲ". ಎಂದಾಗ ನನಗೆ ಅವರ ಮಾತುಗಳು ಅಚ್ಚರಿ ಎನಿಸಲಿಲ್ಲ. ಜನಕ್ಕೆ ಈ ಬಗೆಯ ಗಾಸಿಪ್ಗಳು ತುಂಬಾಪ್ರಿಯವಾಗುತ್ತೆಂತ ಅನ್ನಿಸುತ್ತೆ. ಒಳ್ಳೆಯತನವನ್ನು ಗುರುತಿಸಿ ಅದರ ಬಗ್ಗೆ ಮಾತನಾಡುವುದನ್ನು ಮರೆಯುತ್ತಾರೆಯೇ ಹೊರತು ಟೀಕೆ ಟಿಪ್ಪಣಿಗಳು-ದೋಷಗಳು-ಇವುಗಳು ಮಾತ್ರ ಸದಾ ಸ್ಮೃತಿಯಲ್ಲೆ ಇರುತ್ತೆ. ಅದಕ್ಕೆ ನೀವೇಕೆ ಸಂಕೋಚಪಡಬೇಕು. ಹತ್ತಿರದಿಂದ ನೋಡಿದಾಗ ಒಬ್ಬ ವ್ಯಕ್ತಿಯ ವ್ಯಕ್ತಿತ್ವ ಏನೂಂತ ಅನುಭವಕ್ಕೆ ಬಂದ ಮೇಲೆ ಅವರು ಬೊಬ್ಬೆ ಹೊಡೆದುಕೊಂಡು ನಮ್ಮ ಚಾರಿತ್ರ್ಯ ವಧೆಗೆ ಪ್ರಯತ್ನಿಸಿದರೂ ಅದು ಸಫಲವಾಗುವುದಿಲ್ಲ." ಎಂದೆ. ಬಹುಶಃ ನೇರ ಭೇಟಿಯಿಂದಾಗಿ "ಕಲ್ಪನಾ" ಬಗೆಗಿನ ಕಲ್ಪನೆಗಳು ಆಧಾರವಿಲ್ಲದ್ದು ಎನಿಸಿರಬಹುದು. ಜನಕ್ಕೆ ನನ್ನ ಬಗ್ಗೆ ಏನೋ ಒಂದು ಬಗೆಯ ಕೆಟ್ಟ ಕುತೂಹಲ. ನನ್ನನ್ನು ಮಾತಾಡಿಸಬೇಕು. ನನ್ನ ಹೊಗಳಿಕೆಗಳನ್ನು ತಿರುಚಿಯೋ, ವೈಭವೀಕರಿಸಿಯೋ, ಇಲ್ಲವೇ ಚರ್ಚೆ, ವಿರೋಧಗಳಿಗೆ ದಾರಿಯಾಗುವಂತೆಯೋ ಮಾಡುವ ಹುನ್ನಾರಗಳಲ್ಲಿ ಸಂದರ್ಶನ ಕೋರಿ ಬರುವ ಪತ್ರಕರ್ತರು, ಬೇರೆ ಬೇರೆ ಕ್ಷೇತ್ರದವರೂ ಆಗಾಗ ಕಾಡಿತ್ತಿದ್ದುದುಂಟು.

78 ರ ನಂತರ ಖಾಲಿ ಖಾಲಿ. ನಾನಾಗಿ ಹೋಗಿ ಯಾವ ನಿರ್ಮಾಪಕರನ್ನಾಗಲೀ ನಿರ್ದೇಶಕರನ್ನಾಗಲೀ ಪ್ರಧಾನ ಪಾತ್ರಗಳಿಗಾಗಿ ಬೇಡಿದ್ದಿಲ್ಲ. ಬಂದ ಪಾತ್ರಗಳನ್ನೆಲ್ಲ ಒಪ್ಪಿಕೊಳ್ಳುವ ಸ್ಥಿತಿಯಲ್ಲಿಯೂ ಇರಲಿಲ್ಲ. ನನ್ನದೆ ಒಂದು ಇಮೇಜ್ ಸೃಷ್ಟಿಯಾಗಿತ್ತು. ನಟನೆ, ಅಭಿನಯ ಎಂದರೆ ಕಲ್ಪನಾ. ವೇಷಾಲಂಕಾರ, ಕೇಶಾಲಂಕಾರ, ವಸ್ತ್ರಾಲಂಕಾರ ಅಂದರೆ ಕಲ್ಪನಾರದು- ಎಂದು ಹೊಗಳಿಸಿಕೊಂಡಿದ್ದೆ. ಕಲ್ಪನಾ ಅಂದರೆ ಶರಪಂಜರ ಕಲ್ಪನಾ. ಚಿತ್ರರಂಗದಾಗಸದ ಮಿನುಗುತಾರೆ!- ಈಹ್ ಇವೆಲ್ಲ ನೆನೆಪಿಸಿಕೊಂಡರೆ ಮೈ ಪುಲಕಿತಗೊಳ್ಳುತ್ತದೆ. ಆದರೆ....ಆದರೆ.... ಇವೆಲ್ಲವೂ ಶಾಶ್ವತವಾಗಿ ಇರಲಿಕ್ಕೆ ಸಾಧ್ಯವೇ?

ಕಾಲ ಸರಿದಂತೆ ಜನ ಮರೆಯುತ್ತಾರೆ.ಖ್ಯಾತಿಯ ಔನ್ನತ್ಯದಲ್ಲಿರುವಾಗ, ನಾವು ಚಲಾವಣೆಯಲ್ಲಿರುವಾಗ ದಿನ ನಿತ್ಯ ಸುದ್ದಿಯಾಗುತ್ತೇವೆ. ಆದರೆ ನಮ್ಮ ಪ್ರಖರತೆ ಇಳಿಮುಖವಾದಾಗ ನೋಡಿಯೂ ನೋಡದಂತೆ, ಮುಂದೆ ಸಾಗುತ್ತಾರೆ. ಬಹುಶಃ ನನ್ನ ದುರ್ದಿನಗಳು ಪ್ರಾರಂಭವಾಗಿರಬೇಕು. ಆದರೆ ನನ್ನಾಸೆ ಕಮರಿರಲಿಲ್ಲ. ಫಿನಿಕ್ಸ್ ಆಗಿ ಮರುಹುಟ್ಟು ಪಡೆಯಬೇಕೆಂದುಕೊಳ್ಳುತ್ತಿದ್ದೆ. ನಾನೇ ಏಕೆ ಒಂದು ಚಿತ್ರ ನಿರ್ಮಾಣಕ್ಕೆ ಸಾಹಸ ಮಾಡಬಾರದು ಎನಿಸಿದ್ದುಂಟು. ಊರೆಲ್ಲಾ ನೆಂಟರು, ಊಟಕ್ಕಂತೂ ಒಬ್ಬರಿಲ್ಲ. ಅನ್ನೋ ಹಾಗೆ ನನಗೆ ತುಂಬಾ ಜನ ಆಪ್ತರು, ಸ್ನೇಹಿತರು ಇದ್ದರು. ಆದರೆ ನನ್ನ ಆಂತರ್ಯವನ್ನು ತೆರೆದಿರಿಸಲು ಹೆಚ್ಚು ಮಂದಿ ಇರಲಿಲ್ಲವಾದರೂ ನನ್ನ ಗೆಳತಿ ದಾಮಿನಿ ಮತ್ತು ತೀರಾ ಇತ್ತೀಚೆಗಷ್ಟೇ ಪರಿಚಯವಾಗಿದ್ದ, ಆದರೆ ಅತಿ ದೊಡ್ಡ ವ್ಯಕ್ತಿ ಎನಿಸಿಕೊಂಡಿದ್ದ ವಿಶ್ವನಾಥ್ ಮೊದಲಾಗಿ ಕೆಲವೇ ಮಂದಿ ಆಪ್ತರಿದ್ದರು. ಅವರೆಲ್ಲ ನನ್ನ ಅಭಿಮಾನಿಗಳು; ನನಗೆ ಮಾರ್ಗದರ್ಶಕರು. ನನ್ನ ಕಷ್ಟಕಾಲದಲ್ಲಿನ ಆಪತ್ಬಾಂಧವರು. ಸಂಕ್ಷೇಪವಾಗಿ ಹೇಳಬೇಕೆಂದರೆ ಅವರೆ ನನ್ನ ನೈತಿಕ ಬಲವಾಗಿದ್ದರು. ಈ ಮೂರು ಜನರನ್ನು ಕೇಳಿದೆ. ಆದರೆ ಈಗಿನ ಪರಿಸ್ಥಿತಿಯಲ್ಲಿ ಇಂತಹ ಸಾಹಸ ಸರಿಯಲ್ಲ ಎಂಬ ಅಭಿಪ್ರಾಯದಿಂದ ಸುಮ್ಮನಾದೆ.

ಈ ಮಧ್ಯೆ ಗೌರಿ ಸುಂದರ್ ಅವರು ಫೋನಿಸಿ "ರೂಪತಾರ" ಪತ್ರಿಕೆಗೆ ಇಂಟರ್ ವ್ಯೂ ಕೇಳಿದರು. ಗೌರಿಸುಂದರ್ ಅವರ ಬೇಡಿಕೆಯನ್ನು ಯಾವುದೆ ಕಾರಣಕ್ಕೂ ನಿರಾಕರಿಸುವ ಮನಸ್ಸು ನನ್ನದಾಗಿರಲಿಲ್ಲ. ಅದಕ್ಕೆಂದೆ ಒಪ್ಪಿಗೆ ನೀಡಿದೆ. ಅಲ್ಲದೆ ಇದು ನನಗೆ ನನ್ನ ಬಗ್ಗೆ ಪ್ರಚಲಿತ ವದಂತಿಗಳು ಏನಿದ್ದವು,



ಅದಕ್ಕೆಲ್ಲಾ ಈ ಸಂದರ್ಶನದ ಮೂಲಕ ಉತ್ತರ ನೀಡಲು ಸಾಧ್ಯವಾಗಲಿ ಎನಿಸಿ, ನಿಸ್ಸಂಕೋಚವಾಗಿ ಎಂತಹದೇ ಪ್ರಶ್ನೆಗಳನ್ನಾಗಲೀ ಕೇಳಿ ಎಂದು ಹುರಿದುಂಬಿಸಿದೆ. ಅವರಿಗೆ ಇದರಿಂದ ಬಹಳ ಖುಷಿಯಾದಂತೆ ಕಾಣಿಸಿತು. ನಾನು ಬರಹೇಳಿದ್ದ ವೇಳೆಗೆ ಕರಾರುವಕ್ಕಾಗಿ ಪ್ರತ್ಯಕ್ಷವಾದರು. ಅವರ ಗೆಳಯ ಎ.ಎಸ್.ಮೂರ್ತಿಅವರೊಂದಿಗೆ ಬಂದವರೇ ನನ್ನ ಕೇಳಿದ್ದು, ಮಿನುಗುತಾರೆಯಾಗಿ ಮಿನುಗುತ್ತಿದ್ದವರು ಇದ್ದಕ್ಕಿದ್ದಂತೆ ಸುದ್ದೀಲಿ ಇಲ್ಲದೇ ಹೋದಿರಲ್ಲ? ಎಂದು.

ಅವರ ಪ್ರಶ್ನೆ ನನಗೆ ವಿಚಿತ್ರ ಅನ್ನಿಸಿತು. ಯಾವಾಗಲೂ ಸುದ್ದೀಲಿ ಇರೋಕೆ ಹೇಗೆ ಸಾಧ್ಯ? ನಾನು ಆಶ್ಚರ್ಯ ವ್ಯಕ್ತಪಡಿಸಿದೆ. ಅವರೇ, ಸುದ್ದಿಲಿ ಇರಬೇಕಾದ್ರೆ ಏನೇನು ಮಾಡಬೇಕು ಅಂತ ಟಿಪ್ಸ ಕೊಟ್ಟರು. ವಿವಾದತ್ಮಕ ಹೇಳಿಕೆಗಳನ್ನು ಕೊಟ್ಟೇ. ಇಲ್ಲವೇ ಚಿತ್ರ ನಿರ್ಮಾಣದ ಬಗ್ಗೆ ಜಾಹೀರಾತು ಕೊಟ್ಟೋ ಏನೋ ಒಂದೊಂದು ರೀತಿಲಿ ಹೆಸರು ಬರ್ತಿರೋ ಹಾಗೆ ಮಾಡಬಹುದಾದ ತಂತ್ರವನ್ನು ವಿವರಿಸಿದರು. ಪಬ್ಲಿಸಿಟಿ ಮುಖ್ಯವಾಗಿ ಮನುಷ್ಯನಿಗೆ ಬೇಕು ಅನ್ನೋ ಅಂಶವನ್ನು ಹೇಳಿದರು. ಅವರು ಹೇಳಿದ್ದರಲ್ಲಿ ಸ್ವಲ್ಪ ಸತ್ಯಾಂಶವೂ ಇತ್ತು. ಇವತ್ತಿನ ಜಗತ್ತು ಪಬ್ಲಿಸಿಟಿ ಬೆನ್ನ ಹಿಂದೆ ಓಡುತ್ತೆ. ಹೇಗಾದರು ಸುದ್ದೀಲಿ ಇರಬೇಕು ಅನ್ನೋ ಚಟಪಟಿಕೆ. ನಾನು ಹೇಳಿದೆ:-

"ನೋಡಿ ಸ್ವಾಮಿ, ನಿಮ್ಮ ಉದ್ದೇಶ ಹ್ಯಾಗಾದರೂ ಸರಿ ಸುದ್ದೀಲಿ ಇರ್ಲಿ ಅನ್ನೋದು. ಒಪ್ಪಿಕೊಂಡೆ. ಅದರಲ್ಲೂ ನಮ್ಮಂಥವರು, ಷೋ ಬಿಸಿನೆಸ್‌ನಲ್ಲಿ ಇರೋವ್ರು ಪಬ್ಲಿಸಿಟಿ ಖಂಡಿತಾ ಬೇಕಾಗುತ್ತೆ. ಹಾಗಂತ ಹೇಗೇಗೋ ನಡ್ಕೊಂಡು; ಏನೇನೋ ಮಾಡ್ಕೊಂಡು ಪ್ರಚಾರ ಗಿಟ್ಟಿಸಿಕೊಂಡ್ರೆ ಏನು ಸುಖ ಸಿಗುತ್ತೆ?... ಯಾವ ಕೆಲಸ ಮಾಡಿದರೂ ಸರಿ. ನೋಡ್ದೋರು. ಕೇಳ್ದೋರು "ಸೈ" ಅನ್ನೋ ಅಂತ ಕೆಲಸ ಮಾಡಿ ಪ್ರಚಾರ ಪಡಿಬೇಕೇ ಹೊರತು, ಹ್ಯಾಗ್ಯಾಗೋ ಮಾಡಿ ಪ್ರಚಾರ ಪಡಿಯೋದು ನನಗೆ ಬೇಕಿಲ್ಲ. ಮಾಡುವುದರಲ್ಲಿ ಮುಂದಿನವರಿಗೂ ಮಾದರಿಯಾಗುವಂತಿರಬೇಕು, ಮತ್ತು ಹಿಂದಿನದನ್ನೂ ಮೀರಿಸುವಂತಿರಬೇಕು. ನೀವು ಹೇಳ್ತೀರಲ್ಲ ಟ್ರೆಂಡ್ ಸೆಟ್ಟಿಂಗ್! ಅಂಥಾದ್ದಾಗಿರಬೇಕು. ಪ್ರಚಾರಕ್ಕಾಗಿ ಕ್ವಾಲಿಟಿ ಜೊತೆ ಕಾಂಪ್ರೊಮೈಸ್ ಕೂಡದು.ಸುದ್ದೀಲಿ ಇರ್ಬೇಕೂಂತ ಬುದ್ಧಿ ಕೆಡಿಸಿಕೊಂಡು ಯದ್ವಾ ತದ್ವಾ ನಡ್ಕೊಂಡು ನಾಲ್ಕು ಜನರ ನಗೆಪಾಟಲಿಗೆ ಗುರಿಯಾಗೋದು ನನಗೆ ಬೇಕಿಲ್ಲ.

ಅವರ ಪ್ರಶ್ನೆಯಲ್ಲಿ ನನ್ನ ನಗೆಯಲ್ಲಿ ಕೃತಕತೆ ಜಾಸ್ತಿ ಯಾಕೆ ಅನ್ನೋದು. ಅದಕ್ಕೇನು ಮಾಡುವುದು. ಹೊಸಬರಿಗೆ ಅವರ ದೃಷ್ಟಿಯಲ್ಲಿ ನನ್ನ ನಡೆ

ನುಡಿ ನಗು ಎಲ್ಲವೂ ಆಪ್ಯಾಯಮಾನವಾಗಿತ್ತೆ ಅಂತ ಒಪ್ಪಿಕೊಂಡ ಮೇಲೆ ಆಶ್ಚರ್ಯ ಏನಿದೆ. ಅವರಿಗೆ ಯಾವುದೇ ಕೃತಕತೆ ಕಾಣಿಸದಿದ್ದರೂ ಗೌರಿಸುಂದರ್ ಅವರಿಗೆ ಕೃತಕ ಅನ್ನಿಸಿದರೆ ಅದು ಅವರ ದೃಷ್ಟಿಗೆ ಸಂಬಂಧಿಸಿದ್ದು. ಯಾವ ಬಣ್ಣದ ಕನ್ನಡಕ ಹಾಕಿ ನೋಡುತ್ತಾರೋ ಅದೇ ಬಣ್ಣ ಕಾಣಿಸುವುದಂತೂ ಸ್ವಾಭಾವಿಕವೇ! ಅಂತ ಹೇಳಿ ಬಾಯಿ ಮುಚ್ಚಿಸಿದೆ.

ಇಷ್ಟೇ ಅಲ್ಲ ಅವರು ಸುಮಾರು ಪ್ರಶ್ನೆಗಳ ಬಾಣಗಳನ್ನು ತಮ್ಮ ಬತ್ತಳಿಕೆಯಲ್ಲಿ ತುಂಬಿಕೊಂಡಿದ್ದರು. ಒಂದೊಂದಾಗಿ ನನ್ನ ಮುಂದಿಟ್ಟ ಪ್ರಶ್ನೆಗಳಲ್ಲಿ, "ಶರಪಂಜರ" ದಲ್ಲಿ ನನ್ನ ನೈಜ ಅಭಿನಯಕ್ಕೆ ಸಂಬಂಧಿಸಿದ್ದು, ನಾನು ಉದಾರವಾಗಿ ಮಾತನಾಡಿತ್ತೇನಾದರೂ ನನ್ನಲ್ಲಿ ಹಿಪ್ರೋಕ್ರಸಿ ಕಾಣಿಸುತ್ತದೆ. ಅನ್ನೋದು; ವೈಭವ ಅಟ್ಟಹಾಸಗಳೂ ಸೇರಿವೆ ಅನ್ನೋದು; ನನ್ನ ಮನೆಯಲ್ಲಿ ಎತ್ತರದ ದೀಪದ ಕಂಬಗಳಿಂದಲೇ ದೇವರು ನನಗೆ ಮುಖ್ಯವಾಗಿರಬಹುದೇ–ಹೀಗೆ ನನ್ನ ಬದುಕಿನ ಹಲವಾರು ಮುಖಗಳಿಗೆ ಸಂಬಂಧಿಸಿದ ಪ್ರಶ್ನೆಗಳು ಪುಂಖಾನು ಪುಂಖವಾಗಿ ನನ್ನ ಮೇಲೆ ಎರಗಿದವು.

ಹೌದು, ಆ ಎಲ್ಲ ಪ್ರಶ್ನೆಗಳಿಗೂ ಸಮಧಾನ ಕೊಡಲೇ ಬೇಕು. ಅವು ಕೇವಲ ಗೌರೀವಸುಂದರ್ ಅವರ ಪ್ರಶ್ನೆಗಳಾಗಿರಲಿಲ್ಲ. ಜನ ಸಮಷ್ಟಿಯ ಪರವಾಗಿ ಬಂದವುಗಳು. ನಾನು ಕೊಡುವ ಉತ್ತರಗಳು ಜನಕ್ಕೆ ನೀಡುವ ಉತ್ತರಗಳೂ ಆಗಿರುತ್ತದೆ.

ಶರಪಂಜರದಲ್ಲಿ ನನ್ನದು ನೈಜ ಅಭಿನಯವಾಗಿ ಕಂಡದ್ದಕ್ಕೆ ನನ್ನ ಜೀವನದ ಘಟನೆಗಳು ಪೂರಕವಾಗಿರಬಹುದೆಂಬ ಅನುಮಾನಕ್ಕೆ ಪರಿಹಾರ ನಿರೀಕ್ಷಿಸುತ್ತಿದ್ದರು. ಆದರೆ ನಿಜವಾಗಿ ಹೇಳಬೇಕೆಂದರೆ ಅಭಿನಯವೇ ಬೇರೆ, ಬದುಕಿನ ವಾಸ್ತವ ಘಟನೆಗಳೇ ಬೇರೆ, ಬದುಕನ್ನು ನೋಡುವಾಗ ಅನೇಕ ಘಟನೆಗಳು, ಸನ್ನಿವೇಶಗಳು ನಮ್ಮ ಬದುಕಿನಲ್ಲಿಯೂ ಘಟಿಸಬೇಕಾದ್ದಿಲ್ಲ, ನಮಗೆ ಪ್ರೇರಣೆ ನೀಡುತ್ತದೆ. ನನ್ನ ಅಭಿನಯಕ್ಕೂ ಅಂತಹದೇ ರೀತಿಯು ಪ್ರೇರಣೆ ಇರಬಹುದು. ಒಬ್ಬ ಸಾಹಿತಿಗೆ ಅವನು ಸೃಷ್ಟಿಸುವ ಸಾಹಿತ್ಯದ ಹಿಂದೆ ಬದುಕಿನ ಅನೇಕ ಸಂಗತಿಗಳ ಅನುಭವ





ಇರುತ್ತವೆಯೇ ಹೊರತು ಆ ಸಂಗತಿಗಳೇ ಅಲ್ಲಿ ಮೂಡುವುದಿಲ್ಲ. ಪುಟ್ಟಣ್ಣಾಜಿ ಅಂತಹವರ ಸ್ಫೂರ್ತಿದಾಯಕ ನಿರ್ದೇಶನ, ಪಾತ್ರ ತಲ್ಲೀನತೆಯಿಂದಾಗಿ ಅಭಿನಯದಲ್ಲಿ ನೈಜತೆ ಕಂಡದ್ದು ಅತಿಶಯವೇನೂ ಅಲ್ಲ. ಆದರೆ ಜನಕ್ಕೆ ಅದರಲ್ಲಿ ಮಾತ್ರ ವಿಶೇಷತೆ ಕಂಡಿರಬೇಕು. ಕೇವಲ ಒಂದು ಸಿನಿಮಾ ಅಲ್ಲ. ಪ್ರತಿಯೊಂದು ಸಿನಿಮಾದಲ್ಲೂ ಅಭಿನಯಿಸುವಾಗ, ನಾನು ನಾನಾಗಿ ಇರುವುದಿಲ್ಲ; ಪಾತ್ರವೇ ನಾನಾಗಿ ಇರುತ್ತೇನೆ.

ಇನ್ನು ನನ್ನ ಹಿಪೋಕ್ರೆಸಿಯ ಬಗ್ಗೆ, ವೈಭವ ಅಟ್ಟಹಾಸಗಳ ಬಗ್ಗೆ. ಅವರು ಈ ಶಬ್ದಗಳನ್ನು ಯಾಕೆ ಬಳಸಿದರೋ ನನಗೆ ಅರ್ಥವಾಗಲಿಲ್ಲ. ಅವರಿಗೆ ಸಮರ್ಪಕವಾಗಿ ಉತ್ತರಿಸಲು ಯೋಚಿಸಿದೆ. ಪರವಾಗಿಲ್ಲ ಸ್ವಾಮಿ.... ನಿಮ್ಮ ಚಿತ್ರದಲ್ಲಿ ನಾನು ಯಾಕೆ ನಟಿಸಿದೆ? ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ನಟಿಸಲಿಲ್ಲವೇ? ನಮ್ಮ ಮನೆಗೆ ನೀವು "ಅತಿಥಿ"ಯಾಗಿ ಬಂದಾಗ ನಿಮ್ಮ ಹಿಂದೂ ಮುಂದೂ ಏನುನ್ನೋ ಜಾತಕಾನೂ ಗೊತ್ತಿಲ್ದೆ ಹೋದ್ರೂ ನಿಮ್ಮನ್ನ ಯಾವ ರೀತಿ ಬರಮಾಡಿಕೊಂಡೆ, ಪುರಸ್ಕರಿಸಿದೆ ಅನ್ನೋದು ನೆನಪಿಲ್ದೇ ಹೋಯ್ತೆ? ಇದೆಲ್ಲಾ ಗೊತ್ತಿದ್ದೂ ಈ ರೀತಿ ಒರಟಾಗಿ ಕರ್ಕಶವಾದ ಬಿರುದುಗಳನ್ನು ದಯಪಾಲಿಸಿ ಸೌಜನ್ಯ ಮೀರಿ, ಔಚಿತ್ಯ ಮರೆತು, ಮತ್ತೆ ಮತ್ತೆ ಹಿಪೋಕ್ರಟ್, ಅಟ್ಟಹಾಸ, ವೈಭವ ಅಂತೆಲ್ಲಾ ಪದ ಪ್ರಯೋಗ ಮಾಡಿ ನನ್ನ ಅಭಿಮಾನಿಗಳ ದೃಷ್ಟಿಯಲ್ಲಿ ನನ್ನ ವ್ಯಕ್ತಿತ್ವಾನೇ ಹಾಳು ಮಾಡಬೇಕಂತ, ಹೆಸರಿಗೆ ಮಸಿ ಬಳೀಬೇಕಂತ ಇದ್ದೀರಾ ಹೇಗೆ? ಈ ರೀತಿ ಮಾಡೋ ನಿಮ್ಮನ್ನು ಹತ್ತಿರಕ್ಕೆ ಬರಮಾಡಿಕೊಳ್ಳಬೇಕೆಂದ್ರೆ...ಛೆ!ಛೆ! ಹೋಗಲಿಬಿಡಿ. ಹಿಂಸೆ ಮಾಡೋದ್ರಿಂದ ಪ್ರಯೋಜನವೇನಿದೆ ಹೇಳಿ. ನಾನು ಹಾಗೆ ಮಾಡಿದರೆ ನೀವೂ ನಾನು ಒಂದೇ ಲೆವೆಲ್‌ನವರಂತೆ ಆಗುತ್ತೀವಿ. ಅದಕ್ಕಿಂತ ನೀವು ಇದನ್ನೆಲ್ಲಾ ಮಾತಾಡಿದ್ದು ಇಗ್ನೋರೆನ್ಸಿಯಿಂದ ಅಂದುಕೊಂಡರೆ ಇಬ್ಬರಿಗೂ ಕ್ಷೇಮ ಅಲ್ಲವೇ?"–ಎಂದು ಉದ್ದನೆಯ ಭಾಷಣ ಬಿಗಿದೆ. ಅವರು ಇದರಿಂದ ನಿರುತ್ತರಾದರು.

ಸಿನಿಮಾಗಳ ಯಶಸ್ಸಿಗೆ ಯಾರು ಕಾರಣ, ಯಾರು ಮುಖ್ಯ ಅನ್ನೋದನ್ನು ಯೋಚ್ನೆ ಮಾಡುವುದಾದರೆ-ಎಲ್ಲರೂ ಮುಖ್ಯಾನೇ; ಎಲ್ಲರು ಕಾರಣರೇ ಆದರೆ ಇದೆಲ್ಲಕ್ಕಿಂತ ಮುಖ್ಯವಾದ ಒಂದು ಅಂಶ ಇದೆ. ಅದೇ ಅದೃಷ್ಟ. ಸಿನಿಮಾಗಳಾಗಲೀ, ಕಲಾವಿದರಾಗಲೀ ಅವರವರ ವೈಯಕ್ತಿಕ ಪ್ರತಿಭೆ ಎಷ್ಟೇ ಕೆಲಸ ಮಾಡಿದರೂ ಅದೃಷ್ಟ ಅನ್ನೋದು ಒಂದು ಇಲ್ಲದೆ ಹೋದರೆ, ಯಾವುದೂ ಯಶಸ್ಸಿಗೆ ಭಾಜನವಾಗದು. ನಾನು ಅದೃಷ್ಟ, ದೇವರು-ಇವುಗಳೆಲ್ಲವನ್ನು ನನ್ನ ಅನುಭವದ ಆಧಾರದ ಮೇಲೆ ನಂಬುತ್ತೇನೆ. ಎಲ್ಲವೂ "ಅವನ" ಕೈಲಿರುತ್ತೆ. ತೇಲಿಸಿದರೂ ಮುಳುಗಿಸಿದರೂ-ಎರಡಕ್ಕೂ ಅವನೇ ಹೊಣೆಗಾರ. ಅವನ ಅನುಜ್ಞೆಯಂತೆಯೇ ಎಲ್ಲವೂ ನಡೆಯುತ್ತವೆ. ಹೇಳಿಲ್ಲವೇ "ತೇನ ವಿನಾ ತೃಣಮಪಿ ನ ಚಲತಿ" ಎಂದು. ಅವನ ಅನುಗ್ರಹವಿದ್ದರೆ ಏನೆಲ್ಲವೂ ಆಗಬಹುದು. ಕೇಲಿಲ್ಲವೇ ಬಸವಣ್ಣನವರ ವಚನ? ಏನು ಹೇಳಿದ್ದಾರೆ ಗೊತ್ತಾ- ನೀನೊಲಿದರೆ ಕೊರಡುಕೊನರುವುದಯ್ಯಾ! ನೀನೊಲಿದರೆ ವಿಷವು ಅಮೃತವಹುದಯ್ಯ-ಎಂದು. ಇದರಲ್ಲಿ ನಂಬಿಕೆ ಇಟ್ಟವಳು. ನೀವು ಅಂದುಕೊಂಡಂತೆ ಮಾಡ್ ಡ್ರೆಸ್ ಮಾಡುವವರೆಲ್ಲ ನಾಸ್ತಿಕರಲ್ಲ. "ನಮ್ಮೊಳಗೂ ನಮಗೆ" ನಮ್ಮ ಹೊರವೇಷ ನಮ್ಮ ಸುತ್ತಲಿನವರಿಗೆ. ಮೈ ಮುಚ್ಚಲು ಬಟ್ಟೆ ಒಂದು ಇದ್ದರೆ ಸಾಕು ಎನ್ನುವ ಫಿಲಾಸಫಿಯೇ ಎಲ್ಲರದೂ ಆಗಿದ್ದರೆ ಫ್ಯಾಷನ್ಜಗತ್ತಿಗೆ ಬೆಲೆಯೇ ಇರುತ್ತಿರಲಿಲ್ಲ. ಊಟ ನಮ್ಮಿಚ್ಚೆಗೆ; ನೋಟ ಪರರಿಚ್ಚೆಗೆ. ಇದನ್ನು ಅರ್ಥ ಮಾಡಿಕೊಂಡು ನನ್ನನ್ನು ಪ್ರಶ್ನಿಸಿ. ದೇವರಲ್ಲಿ ನಂಬಿಕೆ ಎಂದ ಮಾತ್ರಕ್ಕೆ 24 ಗಂಟೆಯೂ ಪೂಜೆ, ಭಜನೆ ಎಂದು ಕುಳಿತುಕೊಳ್ಳಬೇಕಿಲ್ಲ. ಮನದಾಳದ ಸ್ಮರಣೆಯೊಂದೇ ಭಕ್ತಿಯ ನಿವೇದನೆಯಾಗಬಹುದು. ಆದರೆ ನನ್ನಲ್ಲಿ ಚೈತನ್ಯ ಶಕ್ತಿ, ಅಮೃತತ್ವ, ಫಲವಂತಿಕೆಗಳನ್ನು ಕರುಣಿಸೆಂದು ಆರ್ತವಾಗಿ ಬೇಡುತ್ತೇನೆ ಅಂದ್ರೆ, ಅವಮಾನ ಅಲ್ಲ ತಾನೆ!!"

ಮುಂದಿನ ಪ್ರಶ್ನೆಗೆ ಚಡಪಡಿಸಿತ್ತಿದ್ದಂತೆ ಕಾಣಿಸಿತು. ಒಳ್ಳೊಳ್ಳೆ ಚಿತ್ರಗಳು, ಮಹಾನಟರು-ನಿರ್ದೇಶಕರುನನ್ನ ಪಾಲಿಗೆ ಲಭ್ಯವಿದ್ದು ನನ್ನದೇ ಆದ ಒಂದು ಸ್ಥಾನವನ್ನು ಪಡೆದುಕೊಂಡಿದ್ದ, ನನ್ನದೆ ಆದ ಒಂದು ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದವಳಿಗೆ ಕಾರ್ನಾಡರ ಜೊತೆಯಲ್ಲಿ ಅಭಿನಯಿಸಬೇಕೆಂದು ಯಾವುದೋ ಸಂದರ್ಭದಲ್ಲಿ, ನನ್ನಾಸೆಯನ್ನೂ ಹೇಳಿಕೊಂಡಿದ್ದೆ, ಅದು ಅವರಿಗೆ ಕುತೂಹಲದ ವಿಷಯವಾಗಿತ್ತು.

ಗಿರೀಶ್ ಕಾರ್ನಾಡರು ನಟರು, ನಿರ್ದೇಶಕರು ಅಷ್ಟೇ ಅಲ್ಲ ಬಹಳ ಒಳ್ಳೆಯ ನಾಟಕಕಾರರು. ಅವರ ಕೆಲವು ನಾಟಕಗಳನ್ನೂ ಓದಿ ಮೆಚ್ಚಿಕೊಂಡಿದ್ದೆ. ನಾಟಕಗಳಷ್ಟೇ ಅಲ್ಲ ಲೇಖನಗಳನ್ನೂ ಕೂಡ!! ಅವ ಪ್ರತಿಭೆ, ಸೃಜನಶೀಲತೆಯ

ಸಾಮರ್ಥ್ಯಕ್ಕೆ ಬೆರಗಾಗಿ ತುಂಬಾ ಗೌರವ ಇರಿಸಿಕೊಂಡಿದ್ದರಿಂದ, ಆಸಕ್ತಿಯಿಂದ ಓದಿದ್ದೆ. ನಾನು ಗೌರವಾದರಗಳನ್ನು ಬೆಳೆಸಿಕೊಂಡಿದ್ದ, ಇರಿಸಿಕೊಂಡಿದ್ದ ಕೆಲವೆ ಕೆಲವು ವ್ಯಕ್ತಿಗಳಲ್ಲಿ ಕಾರ್ನಾಡರೂ ಒಬ್ಬರಾಗಿದ್ದರು ಅಷ್ಟೇ. ಅವರ ಪರಿಚಯವೂ ತೀರಾ ಹತ್ತಿರದ್ದೇನೂ ಆಗಿರಲಿಲ್ಲ. ಎಲ್ಲೋ ಒಂದೆರಡು ಸಂದರ್ಭಗಳಲ್ಲಿ ಪರಸ್ಪರ ಒಬ್ಬರನ್ನೊಬ್ಬರು ಪರಿಚಯಿಸಿಕೊಂಡಿದ್ದೆವು. ಅಷ್ಟು ಹೊರತಾಗಿ ಮತ್ತೇನೂ ಅಲ್ಲ...... ಹಾಗೂ ಯಾವುದೋ ಒಂದು ಸಂದರ್ಭದಲ್ಲಿ ನಿರ್ಮಾಪಕರೊಬ್ಬರು, ಗಿರೀಶರನ್ನೂ ನನ್ನನ್ನೂ ಸಾಧ್ಯವಾದರೆ ಅವರ ಮುಂದಿನ ಸಿನಿಮಾದಲ್ಲಿ ಸೇರಿಸಿಕೊಳ್ಳುವುದಾಗಿ ಹೇಳಿದ್ದರು. ಅದಕ್ಕೆ ಸಧ್ಯದಲ್ಲೆ ಕಾಲ್ ಶೀಟ್ ಕಳಿಸುತ್ತೇನೆ ಅಂತಲೂ ಅಂದಿದ್ದರು. ನಾನೂ ಖುಷಿಯಾಗಿಯೇ, ಇಂಥ ಅವಕಾಶ ಬಂದರೆ ಯಾಕಾಗಬಾರದು ಅಂತ, ನನ್ನ ಒಪ್ಪಿಗೆ ತಿಳಿಸಿ, ನನಗೆ ಇದು ಸಂತೋಷದ ಸಂಗತಿ ಅಂತ ತಿಳಿಸಿದ್ದೆ. ಇದರಿಂದ ಇಂಥ ಪ್ರಶ್ನೆಗಳು ಉದ್ಭವಿಸಬಹುದು ಅನ್ನೋ ಕಲ್ಪನೆ ಇರಲಿಲ್ಲ.... ಏನಾದರೂ ಪ್ರಶ್ನೆಗೆ ನನ್ನನ್ನು ಗುರಿಮಾಡಿ ಮುಂದಿನ ಅಪಪ್ರಚಾರಕ್ಕೆ ತೆರೆಬಿತ್ತಲ್ಲ-ಎಂದೇಲ್ಲಾ ಅವರಿಗೆ ಸರಿಯಾಗಿ ಮನದಟ್ಟಾಗುವಂತೆ, ಇಡೀ ಪ್ರಸಂಗದ ಹಿಂದಿನದೆಲ್ಲವನ್ನೂ ವಿವರಿಸಿ ಹೇಳಿದೆ.

ಮುಂದೆಯೂ ಗೌರಿಸುಂದರ್‌ಗೆ ಇನ್ನು ಕೆಲವು ಖಾಸಗಿ ಪ್ರಶ್ನೆಗಳನ್ನು ಕೇಳುವುದಿತ್ತು. "ಕುಡಿಯರ ಕೂಸು" ಸಿನಿಮಾದಲ್ಲಿ "ಸೂಳೆ" ಪಾತ್ರದ ಬಗ್ಗೆ, ಭೂತಾಕಾರದ ಬಂಗಲೆಯಲ್ಲಿ ನಾನೇಕೆ ಒಂಟಿಯಾಗಿರುತ್ತೇನೆ? ನನಗೆ ಪ್ರಶಸ್ತಿಗಳು ಬಂದರೆ? -ಹೀಗೆಲ್ಲಾ ಏನೇನೋ ಪ್ರಶ್ನೆಗಳು!!

ಪ್ರಶಸ್ತಿಗಳು-ಟೀಕೆ ಟಿಪ್ಪಣಿಗಳು- ಇವುಗಳಲ್ಲಿ ಯಾವುದರಲ್ಲೂ ನನಗೆ ಆಸಕ್ತಿ ಇಲ್ಲ. ನನ್ನಾತ್ಮಸಾಕ್ಷಿಗೆ, ನನಗೆ ವಹಿಸಿಕೊಟ್ಟ "ಪಾತ್ರ"ಕ್ಕೆ ಪ್ರಾಮಾಣಿಕವಾಗಿ ನ್ಯಾಯ ಸಲ್ಲಿಸುತ್ತೇನೆ. ಅಭಿನಯ ಸಂದರ್ಭದಲ್ಲಿ ಅವಾರ್ಡುಗಳ ಬಗ್ಗೆ ತಲೆ ಕೆಡಿಸಿಕೊಳ್ಳಲು ಹೋಗುವುದಿಲ್ಲ. ಅವು ನನಗೆ ಮುಖ್ಯವೂ ಸಲ್ಲ. ಗೀತೆಯಲ್ಲಿ ಹೇಳಿದಂತೆ "ಕರ್ಮಣ್ಯೇವಾಧಿಕಾರಸ್ಥೆ ಮಾಫಲೇಷು ಕದಾಚನ:" ಕರ್ಮ ಮಾಡುವುದಷ್ಟು ಮಾತ್ರವೇ ನಮ್ಮದು; ಫಲಾಪೇಕ್ಷೆ ಸಲ್ಲದು.-ಹಾಗೆಂದು ಸನ್ಯಾಸಿಯಂತೆ, ಪ್ರಶಸ್ತಿ ಬಂದಾಗ ಸಂಭ್ರಮಿಸದೆ ನಿರ್ವಿಕಲ್ಪ ಸ್ಥಿತಿಯಲ್ಲೂ ಇರಲಾರೆ. ನಾನೂ ಒಬ್ಬ ಮನುಷ್ಯಳೇ. ಸಂದರ್ಭಕ್ಕೆ ತಕ್ಕಂತೆ ಸಂತೋಷ, ಸಂಭ್ರಮ, ದುಃಖ-ಎಲ್ಲ ರೀತಿಯಲ್ಲೂ ಸ್ಪಂದಿಸುತ್ತೇನೆ. ಒಂದು ವೇಳೆ ದೇಶದ ಉತ್ತಮ ನಟಿ ಪ್ರಶಸ್ತಿ ಬಂದು, ಕೈ ತುಂಬಾ ಹಣವೂ ಬಂದರೆ ಜಾಲಿಯಾಗಿ ದಿಲ್ಲಿ,ಗಿಲ್ಲಿ ಎಲ್ಲಾ ಸುತ್ತಿಕೊಂಡು ಬಂದು ಮಜಾ ಮಾಡಿದರಾಯಿತು. ಅದರಲ್ಲೂ ನಮ್ಮಂಥ



ಅಭಿನೇತ್ರಿಯರಿಗೆ ಸ್ವಲ್ಪ ಪ್ರಚಾರಾನೂ ಜಾಸ್ತಿಯಾಗೇ ಸಿಗುತ್ತೆ. ಅದಕ್ಕಾಗಿ ನಮ್ಮಂಥವರು ಎಲ್ಲಕ್ಕೂ ಸಜ್ಜಾಗಿ ನಿಂತಿರುತ್ತೇವೆ.–ಎಂಬುದನ್ನು ವಿವರಿಸಿ ಹೇಳಿದೆ.

ಇನ್ನು "ಒಂಟಿತನ"! ಯಾಕೋ ಏನೋ ಜನಕ್ಕೆ ನನ್ನ ಬಗ್ಗೆ ತಪ್ಪು ಕಲ್ಪನೆಗಳೇ ಹೆಚ್ಚು. ನಾನು ಯಾವಾಗಲೂ "ಮೂಡಿ" ಯಾರೊಂದಿಗೂ ಬೆರೆಯುವುದಿಲ್ಲ. ಯಾರನ್ನೂ ಮನೆಗೆ ಸೇರಿಸುವುದಿಲ್ಲ. ಬೃಹತ್ತಾದ ಭೂತಬಂಗಲೆಯಂತಹ ತನ್ನ ಸ್ವಂತ ಮನೆಯಲ್ಲಿ ಒಂಟಿಯಾಗಿ ದೆವ್ವದಂತೆ ವಾಸ ಮಾಡುತ್ತಾಳೆ. ದೊಡ್ಡಸ್ತಿಕೆಯಿಂದ ಜನರನ್ನು ಹತ್ತಿರ ಸೇರಿಸುವುದಿಲ್ಲ.... ಇತ್ಯಾದಿ ಇತ್ಯಾದಿ ಕಾಮೆಂಟ್ಸ್ ನನ್ನ ಹೆಸರಿಗೆ ಅಂಟಿಕೊಂಡಿದ್ದವು. ಜನರ ಈ ಭ್ರಮೆಗಳನ್ನು ದೂರ ಮಾಡಲೇಬೇಕು.

ಯಾವತ್ತೂ ನಾನು ಒಂಟಿಯಾಗಿ ಇರಬೇಕೆಂದು ಬಯಸಲಿಲ್ಲ. ನಾನೇನು ಭೂಮಿಗಿಳಿದು ಬಂದ ದೇವತೆಯಲ್ಲ. ನನ್ನನ್ನು ಶ್ರೇಷ್ಠ ಅಥವಾ ದೊಡ್ಡವಳು ಎಂದು ಭಾವಿಸಿಕೊಳ್ಳೋದಕ್ಕೆ. ಎಲ್ಲರಂತೆ ನನಗೂ ತಂದೆ ತಾಯಿ, ಬಂಧು ಬಳಗ, ಆಪ್ತರು, ಸ್ನೇಹಿತರು ಎಲ್ಲರೂ ಇದ್ದಾರೆ. ಹಾಗೆ ನೋಡಿದರೆ ನನ್ನ ಮನೆ ತುಂಬಾ ಆತ್ಮೀಯ ಬಂಧುಗಳು ತುಂಬಿದ್ದಾರೆ; ನನ್ನ ಪ್ರೀತಿಯ ನಾಯಿಗಳೂ ಇವೆ. ಸೌಹಾರ್ದತೆ, ಸ್ನೇಹಗಳಿಂದ, ಅಗತ್ಯಕ್ಕೆ ಅನಾಯಾಸವಾಗಿ ಸಹಾಯಕ್ಕೆ ಮುಂದಾಗುವ ನೆರೆ ಹೊರೆ ಇದ್ದಾರೆ. ನನಗೂ ಎಲ್ಲರ ಒಡನಾಟ,

ಅವರ ಜೊತೆ ಹರಟೆ, ಪರಸ್ಪರ ವಿಚಾರಗಳ ವಿನಿಮಯ ಎಲ್ಲವೆ ಬೇಕಿದೆ. ಎಲ್ಲರೂ ನನಗೆ ಬೇಕು. ನನ್ನ ಭಾವನೆಗಳನ್ನು ಹಂಚಿಕೊಳ್ಳಬೇಕು ಎನಿಸುತ್ತೆ. ನನಗೆ ತೀರಾ ತೀರಾ ಹತ್ತಿರವಾಗಿರುವ ಆಪ್ತ ಗೆಳೆಯರು, ಗೆಳತಿಯರು ಇದ್ದಾರೆ. ನನ್ನ ಸಿನಿರಂಗದಲ್ಲೂ ಕೆಲವರು ಸಹ ಕಲಾವಿದರಿದ್ದಾರೆ. ಅದರಲ್ಲೂ ಕಲ್ಯಾಣ್ ದಂಪತಿಗಳು ಮತ್ತು ಪುಟ್ಟಣ್ಣಾಜಿ. ಮತ್ತು ಇನ್ನೂ ಕೆಲವರು. ನನ್ನಾತ್ಮದ ಒಂದು ಭಾಗವೆಂಬಂತೆ ನನ್ನ ಗೆಳತಿ ದಾಮಿನಿ ಇದ್ದಾಳೆ. ಅವಳಿಂದ ಮರೆಮಾಚಿದ ಗುಟ್ಟುಗಳಿಲ್ಲ. ನನಗೆ ನಾನು ಗೊತ್ತಿರುವುದಕ್ಕಿಂತ ಹೆಚ್ಚಾಗಿ ನಾನು ಅವಳಿಗೆ ಗೊತ್ತಿದ್ದೇನೆ. ನೋವಿನ ಕ್ಷಣಗಳಲ್ಲಿ ನನಗಾದ ಗಾಯಗಳನ್ನು



ತೆರೆದು ತೋರಿಸಿದ್ದೇನೆ. ಸಂತೋಷದಲ್ಲಿದ್ದಾಗ ಸಿಹಿಯ ಸವಿಯನ್ನು ಹಂಚಿಕೊಂಡು ಸವಿದಿದ್ದೇವೆ. ಮನುಷ್ಯರ ಸ್ನೇಹ, ಸಹವಾಸ ಬೇಡವೆನ್ನಲು ನಾವೇನು ದ್ವೀಪಗಳೇ?

ಸ್ನೇಹಿತರಷ್ಟೇ ಅಲ್ಲ ಪರಿಚಿತರೋ, ಅಪರಿಚಿತರೋ ಯಾರೇ ಬರಲಿ ತೆರೆದ ಹೃದಯದಿಂದ ತೆರೆದ ಬಾಗಿಲಲ್ಲಿ ನಿಂತು ಮುಗುಳ್ನಗೆಯಿಂದ ಸ್ವಾಗತಿಸಿ, ವಿಚಾರಿಸುತ್ತೇನೆ. ನನ್ನ ಕೈಲಾದ ಮಟ್ಟಿಗೆ ಅತಿಥಿ ಸತ್ಕಾರಕ್ಕೂ ಮುಂದಾಗುತ್ತೇನೆ. ಆದರೆ ಅನವಶ್ಯಕವಾದ ಗದ್ದಲದ ಗುಂಪಿನಿಂದ ಮಾತ್ರ ದೂರವಿರುತ್ತೇನೆ. ನನಗೆ ನನ್ನ ಮನಸ್ಸಿಗೆ ಒಪ್ಪಿದರೆ ಮಾತ್ರವೇ ಅವರಿಗೆ ಮುಕ್ತವಾಗಿ ತೆರೆದುಕೊಳ್ಳುತ್ತೇನೆ. ಇಲ್ಲವಾದರೆ ಇಲ್ಲ. ಒಮ್ಮೆ ವ್ಯಕ್ತಿಗಳಾಗಲೀ, ಪರಿಸರವಾಗಲೀ ಇಷ್ಟವಾಯಿತೆಂದರೆ, ನನ್ನ ಮಾತಿಗೆ ನಿಲುಗಡೆ ಇರುವುದಿಲ್ಲ. ನಿರಂತರ ಮಾತು

ನಡೆದೇ ಇರುತ್ತದೆ. ಅದಕ್ಕೇ ಹರಟೆ ಮಲ್ಲಿ, ಮಾತಿನ ಮಲ್ಲಿ- ಎಂಬ ಬಿರುದುಗಳೂ ನನ್ನ ಅಲಂಕರಣಗಳಾಗಿವೆ. ಹೀಗಿರುವಾಗ ನನ್ನದು ಒಂಟಿ ಬದುಕು. ನನಗೆ ಒಂಟಿತನ ಇಷ್ಟ-ಇಂಥಾದ್ದನ್ನೆಲ್ಲ ತೆಗೆದು ಬಿಡಿ ಎಂದು ತಿಳಿಸಿ ಹೇಳಿದೆ.

ಇಷ್ಟು ಸುಧೀರ್ಘವಾದ ಮಾತುಕತೆಯಲ್ಲಿ ವೇಳೆ ಕಳೆದದ್ದೇ ಗೊತ್ತಾಗಲಿಲ್ಲ. ಗೌರಿಸುಂದರ್ ಅವರತ್ರ ನೋಡಿದೆ. ನನ್ನ ಮಾತಿನಿಂದ ಕನ್‌ವಿನ್ಸ್ ಆದ ಹಾಗೆ ಕಾಣಿಸಿದರು. ತೆರೆದ ಮನಸ್ಸಿನಿಂದ, ತಮ್ಮ ಘಾಸಿಗೊಳಿಸುವ ಪ್ರಶ್ನೆಗಳಿಂದ ಉದ್ವಿಗ್ನರಾಗದೆ, ಸಮಾಧಾನವಾಗಿ, ತಮಾಷೆಯಾಗಿ, ಗಂಭೀರವಾಗಿ ನನ್ನ ವಿಚಾರಗಳನ್ನು ಹಂಚಿಕೊಂಡದ್ದಕ್ಕೆ ಕೃತಜ್ಞತೆ ಹೇಳಿ ಮತ್ತೆ ಭೇಟಿಯಾಗೋಣವೆಂದು ತಿಳಿಸಿ, ನಾನು ನೀಡಿದ ಕಾಫಿ, ತಿಂಡಿಯ ಸವಿಯನ್ನು ಹೊಗಳಿ ಹೋದರು.

ಈಗ ನನ್ನ ಕೆಲಸ ಮುಗಿದಿದೆ. ಖಾಲಿ ಖಾಲಿಯಾಗಿ ಫೀಲ್ ಮಾಡುತ್ತಿದ್ದೇನೆ. ಸಿನಿಮಾರಂಗದಿಂದ ನನಗೆ ಒಪ್ಪಿತವಾದ ಯಾವ ಆಫರ್‌ಗಳೂ ಇಲ್ಲವಾಗಿದೆ. ಕ್ರಿಯಾಶೀಲವಾಗಿ ಉಳಿಯಲು ಏನಾದರೂ ಮಾಡಬೇಕು. ಅದಕ್ಕಾಗಿ ಮತ್ತೆ ನಾಟಕಗಳೆಡೆಗೆ ತಿರುಗುವ ಯೋಚನೆಯಲ್ಲಿದ್ದೇನೆ. ಹೇಗಿದ್ದರೂ ಗುಡಿಗೇರಿ ಬಸವರಾಜರ ಕಂಪನಿಯಿಂದ ನಾಟಕಗಳಲ್ಲಿ ಪಾತ್ರ ಮಾಡಲು ಕರೆ ಬಂದಿದೆ. ಹೋಗಬೇಕೆಂದು ನಿರ್ಧಾರ ಮಾಡಿದ್ದೇನೆ. ಆದರೆ ನಾಟಕಗಳಿಗೆ ಮರುಳುವುದು ಮನೆಯಲ್ಲಿ ಯಾರಿಗೂ ಇಷ್ಟವಿಲ್ಲ. ನನ್ನ ಆತ್ಮೀಯ ಸ್ನೇಹಿತರಾದ ವಿಶ್ವನಾಥ್ ಅವರಿಗೂ ಇಷ್ಟವಿಲ್ಲ. ಆದರೂ ಹೋಗಬೇಕೆಂದು ನಿರ್ಧರಿಸಿದ್ದೇನೆ. ಯಾಕೋ ಏನೋ ನನ್ನ ಒಳಗಿನ ಕರೆಯ ಒತ್ತಾಯಕ್ಕೆ ಮಣಿಯದೆ ಇರಲಾರೆ."ಕಲ್ಪನಾ ದಿನಚರಿಯ ಬರವಣಿಗೆ ಅಲ್ಲಿ ಮುಕ್ತಾಯ ಆಗಿತ್ತು.

ಈಗ ಅವಳಿಲ್ಲ. ಅವಳ ನೆನಪು ಮಾತ್ರವೇ ಸುಳಿದಾಡುತ್ತಿದೆ. ಅವಳ ಬರವಣಿಗೆಯಿಂದ ತಪ್ಪಿಸಿಕೊಂಡಿರಬಹುದಾದ ಇನ್ನೂ ಅನೇಕ ಸಂಗತಿಗಳು ಇರಬಹುದು. ಅದಕ್ಕಾಗಿ ಅವಳನ್ನು ಬಲ್ಲಂತಹ ಕೆಲವರನ್ನು ಮಾತನಾಡಿಸುವುದೋ ಇಲ್ಲವೇ ಬರೆದಿದ್ದನ್ನು ಜೋಡಿಸುವುದೋ ಏನಾದರೂ ಮಾಡಿ, ಒಂದು ಸ್ಮರಣೆ ಪುಸ್ತಕ ತರಬೇಕು. ಮೂವತ್ತು ವರ್ಷಗಳೇ ಕಳೆದಿದೆ. ಚಿತ್ರರಂಗದ ಅಮೃತೋತ್ಸವದ ಸಂದರ್ಭದಲ್ಲಿ ಮಹಾನ್ ಕಲಾವಿದೆಯ ನೆನಪಿನಲ್ಲಿ ಇರುತ್ತದೆ. ಎಂದು ಕೊಳ್ಳುತ್ತಿರುವಾಗಲೇ ಗೌರಿಸುಂದರ್ ಅವರಿಂದ ಪುಸ್ತಕ ಬರೆದು ಕೊಡುವುದಕ್ಕೆ ಒಂದು ರಿಕ್ವೆಸ್ಟ್ ಬಂತು. ಇದು ನಿಜವಾಗಿಯೂ ಯೋಗಾಯೋಗ ಅನಿಸಿತು.

ಇದನ್ನೇ ನೆಪವಾಗಿಸಿಕೊಂಡು, ನನಗೆ ಆಗಾಗ್ಗ ಬರೆಯುತ್ತಿದ್ದ ಕೆಲವು ಪತ್ರಗಳಿದ್ದವು. ಅವೆಲ್ಲವುಗಳನ್ನು ಮತ್ತೆ ಓದಿ, ಹೊಸ ಅಂದರೆ ದಿನಚರಿಯಲ್ಲಿ ಇಲ್ಲದೇ ಹೋಗಿರುವ ವಿಷಯಗಳೇನಾದರೂ ಇರಬಹುದು ಎಂದು ಹುಡುಕಾಡಿದೆ. ಸಾಮಾನ್ಯವಾಗಿ ದಿನಚರಿಯ ಪುಟಗಳಲ್ಲಿ ಕಾಣಿಸಿದ್ದ ಮನಃಸ್ಥಿತಿ, ಜರುಗಿದ ಘಟನೆಗಳು ವ್ಯಕ್ತಿಗಳಿಂದಾದ ಅವಮಾನದ ಪ್ರಸಂಗಗಳು ಪುನರ್ಲೇಖನವೇ ಪತ್ರದಲ್ಲಿಯೂ ಇದ್ದವು. ತುಂಬಾ ತಡಕಾಡಿದ ಮೇಲೆ ಒಂದು ನಾಲ್ಕೈದು ಪತ್ರಗಳಲ್ಲಿ, ಕಾವೇರಿ ಫಿಲಂ ಸೊಸೈಟಿಯ ಆರಂಭೋತ್ಸವ, ಬೈಲೋ ರಷ್ಯಾದಲ್ಲಿ ನಡೆದ ಕನ್ನಡ ಚಿತ್ರೋತ್ಸವಕ್ಕೆ ಕರ್ನಾಟಕದಿಂದ ಸಾಂಸ್ಕೃತಿಕ ಪ್ರತಿನಿಧಿಯಾಗಿ ಹೋದದ್ದು- ಇವುಗಳ ಕುರಿತು ಒಂದಿಷ್ಟು ಇನ್‌ಫರ್‌ಮೇಟೀವಾಗಿ ವಿಷಯಗಳನ್ನು ತಿಳಿಸಿದ್ದಳು.

ನನಗೆ ತಿಳಿದಂತೆ ತುಂಬಾ ಹಚ್ಚಿಕೊಂಡಿದ್ದ ವ್ಯಕ್ತಿಗಳೆಂದರೆ ಕಲ್ಯಾಣ್ ಕುಮಾರ್ ಮತ್ತು ರೇವತಿ ಕಲ್ಯಾಣ್ ಕುಮಾರ್‌ರನ್ನು ಅವರೂ ಹಾಗೆಯೇ ಅವಳನ್ನು ಅತ್ಯಂತ ಪ್ರೀತಿಯಿಂದ ನಡೆಸಿಕೊಳ್ಳುತ್ತಿದ್ದರು. ಅವಳನ್ನು ಅರ್ಥಮಾಡಿಕೊಂಡಿದ್ದ ಕೆಲವೇ ಕೆಲವರಲ್ಲಿ ಇವರಿಬ್ಬರೂ ಪ್ರಮುಖ. ಮೊದಲ ಪರಿಚಯದಿಂದಲೇ ಕಲ್ಯಾಣ್ ಅವರು ಕಲ್ಪನಾಳ ಪ್ರತಿಭೆಯನ್ನು ಗುರುತಿಸಿದ್ದರು. ಒಂದಲ್ಲ ಒಂದು ದಿನ ಚಿತ್ರರಂಗದ ಮೇರು ಅಭಿನೇತ್ರಿ ಆಗುತ್ತಾಳೆಂದು ಪದೇ ಪದೇ ಭವಿಷ್ಯ ನುಡಿದಿದ್ದರು. ರೇವತಿ ಕಲ್ಯಾಣ್ ಅವರ ಮಾತಿನಲ್ಲಿಯೇ ಹೇಳುವುದಾದರೆ "ಕಲ್ಪನಾ ಭಾವ ಜೀವಿ. ಸೂಕ್ಷ್ಮ ಸ್ವಭಾವದ ಹೆಣ್ಣು. ವೇದನೆಗಳನ್ನು ಅಂತರಂಗದಲ್ಲಿಯೇ ಅಡಗಿಸಿಕೊಂಡು ಆ ನೋವುಗಳೆಲ್ಲಾ ಬೆಳೆದು ಪ್ರಳಯವಾಗಿ ಅವಳ ಮನದಲ್ಲೇ, ಅಡಗಿತ್ತು. ಒಮ್ಮೊಮ್ಮೆ ಆ ಪ್ರಳಯ ತುಸು ಸ್ಫೋಟವಾದಾಗ ಆಕೆಯನ್ನು ಎಲ್ಲರೂ 'ಮೂಡಿ ಅರ್ಥವಿಲ್ಲದೆ ಅಳುತ್ತಾಳೆ. ಮರುಕ್ಷಣ ನಗುತ್ತಾಳೆ. ಹುಚ್ಚು ಹುಡುಗಿ" ಎಂದು ಹೇಳುತ್ತಿದ್ದರು. ಅಕೆಯ ಸ್ನೇಹಿತರಿಗೆ ಅಥವಾ ಆ ವೇದನೆ ಅನುಭವಿಸಿದವರಿಗೆ ಮಾತ್ರ ಗೊತ್ತು. ಅದು ಹುಚ್ಚಲ್ಲ. ವಿಧಿಯ ಮೇಲಿನ ಕಿಚ್ಚೂಂತ" – ಕಲ್ಪನಾರನ್ನು ಕುರಿತ ಈ ಅಭಿಪ್ರಾಯ ನಮ್ಮೆಲ್ಲರದೂ ಆಗಿತ್ತು. ಎಷ್ಟೋ ಸಲ ಹೇಳುತ್ತಿದ್ದಳು". – ನಾವು ಬಯಸಿದಂತೆ ಬದುಕಲೂ ಸಾಧ್ಯವಿಲ್ಲ ಈ ಜಗತ್ತಿನಲ್ಲಿ. ಮುಕ್ತವಾಗಿ ಅಳುವುದಕ್ಕಾಗಲೀ, ನಗುವುದಕ್ಕಾಗಲಿ ನಮಗೆ ಸ್ವಾತಂತ್ರ್ಯವಿಲ್ಲ. ಸಮಾಜದಲ್ಲಿ ನಮ್ಮ ಒಂದೊಂದು ನಡವಳಿಕೆಯನ್ನೂ ಎಚ್ಚರದಿಂದ ನಿಯಂತ್ರಿಸಿಕೊಂಡೇ ಬದುಕಬೇಕಾಗುತ್ತದೆ' – ಎಂದು.

'ಪ್ರೇಮ' ಅವಳ ಪಾಲಿನ ಶತ್ರುವಾಗಿತ್ತು. ಅತಿಯಾಗಿ ಪ್ರೀತಿಸಲು. ಪ್ರೇಮಿಸಲು ಹೋಗಿ, ಭಗ್ನಗೊಂಡು. ಭಯಂಕರ ಮಾನಸಿಕ ಆಘಾತಕ್ಕೆ ಒಳಗಾಗಿ,

ಉದ್ವಿಗ್ನತೆಯ ಉತ್ಕರ್ಷ ಸ್ಥಿತಿಯಲ್ಲಿ 'ಹುಚ್ಚಿ'ಯಂತೆ ಕಾಣಿಸುತ್ತಿದ್ದರೆ, ಅದು ಅವಳ ಸಂದರ್ಭದಲ್ಲಿ ಸ್ವಾಭಾವಿಕವೂ ಸಹಜವೂ ಆಗಿತ್ತು.



ಯಾರ ಮಾತೂ ಕೇಳದ ಕೆಟ್ಟ ಹಠ ಅವಳದಾಗಿತ್ತು. ಆನಿಸಿದ್ದನ್ನು ಮಾಡದೆ ಬಿಡುವವಳಲ್ಲ. ಹಠ ಮಾರಿತನ ತನ್ನನ್ನು ಎಲ್ಲಿಗೆ ಕೊಂಡೊಯ್ಯಬಹುದು ಎಂದು ಯೋಚಿಸುವ ತಾಳ್ಮೆಯಾಗಲೀ. ವಿವೇಕವಾಗಲಿ ಇದ್ದಿದ್ದರೆ ಅವಳ ಪಾಲಿನ ದುರಂತ ತಪ್ಪಿಸಬಹುದಾಗಿತ್ತು.

ನಾಟಕಗಳ ತಂಟೆಗೆ ಹೋಗಬೇಡವೆಂದು ಮನೆಯಲ್ಲಿ ಎಲ್ಲರೂ ಹೇಳಿದರು; ಕಲ್ಯಾಣ್ ಮತ್ತು ರೇವತಿ ಇಬ್ಬರೂ ಎಷ್ಟೋ ರೀತಿಯಲ್ಲಿ ತಿಳಿಸಿ ಹೇಳಿದರು. ಹಾಗೆ ನಾಟಕಗಳೇಬೇಕೆನಿಸಿದರೆ, ಅವಳಿಗಿದ್ದ ಅನುಭವದಲ್ಲಿ ಅವಳೇ ಒಂದು ತಂಡವನ್ನು ಕಟ್ಟಬಹುದಾಗಿತ್ತು; ಕಂಪೆನಿಯನ್ನು ಸ್ಥಾಪಿಸಬಹುದಾಗಿತ್ತು. ಆದರೆ ಹಾಗೆ ಮಾಡದೆ ಕಾಂಟ್ರಾಕ್ಟ್ ಮೇಲೆ ಮೂರು ವರ್ಷಕ್ಕೆಂದು ಗುಡಿಗೇರಿ ಬಸವರಾಜ ನಾಟಕ ಕಂಪನಿಗೆ ಹೋದಳು.

ಕಡೆ ಕಡೆಗೆ ತೀರಾ ದಣಿದು ಹೋಗಿದ್ದಳು. ಪದೇ ಪದೇ ಅನಾರೋಗ್ಯ ಕಾಡುತ್ತಿತ್ತು. ವಿಶ್ರಾಂತಿಯಿಲ್ಲದೆ ದುಡಿದಳು. ಒಮ್ಮೆ ತೀರಾ ಅನಾರೋಗ್ಯದಿಂದ

ಬಳಲಿದ್ದಾಗ, ಯಾಕೋ ಗಾಭರಿಯಾಗಿ, ಕಲ್ಯಾಣ್ ದಂಪತಿಗೆ ಪೋನ್ ಮಾಡಿ ಮನೆಗೆ ಕರೆಸಿಕೊಂಡಳು. ಒಂದಷ್ಟು ಮಾತು ಕತೆ ಆದ ಮೇಲೆ ಆತ್ಮೀಯತೆಯಿಂದ ಕಲ್ಯಾಣ್ ಅವರು ಕಲ್ಪನಾಗೆ ಎಷ್ಟೋ ರೀತಿಯಲ್ಲಿ ಬುದ್ಧಿವಾದ ಹೇಳಿದರು. "ಕಲ್ಪನಾ, ನಿನ್ನ ಆರೋಗ್ಯ ನಮಗೆ ಮುಖ್ಯ ನಿನ್ನ ಹೆಸರು. ಹಣ. ಪ್ರಖ್ಯಾತಿ – ಅವೆಲ್ಲ ನಮಗೆ ಮುಖ್ಯ ಅಲ್ಲ...... ನಿನಗೆ ಸಮಸ್ಯೆಗಳು ಇರಬಹುದು ಹಾಗಂತ ನಿನ್ನನ್ನು ಆಹುತಿ ಕೊಟ್ಟುಕೊಳ್ಳಬಾರದಲ್ಲ! ಅಲ್ಲದೆ ಸಿನಿರಂಗದ ಉತ್ತುಂಗ ತಾರೆಯಾದ ನೀನು ಹೀಗೆ ನಾಟಕಗಳಲ್ಲಿ ಅಭಿನಯಿಸುವುದು ಸರಿಯಲ್ಲ; ನಾಟಕಗಳು ನಿನ್ನಂಥವರಿಗಲ್ಲ. ನೀನು ನಾಟಕಗಳಿಗೆ ಮತ್ತೆ ಹೋಗಬೇಡ..... ದಯವಿಟ್ಟು ನಾವು ಯಾಕೆ ಹೇಳುತ್ತಿದ್ದೇವೆಂದು ಅರ್ಥ ಮಾಡಿಕೋ. ನಿನ್ನ ಹಠ, ಚಟ ಬಿಟ್ಟುಬಿಡು" – ಎಂದು ಎಷ್ಟೇ ಹೇಳಿದರೂ ಯಾವಾಗಲೂ ಅವಳ ಬತ್ತಳಿಕೆಯಲ್ಲಿ ಥಟ್ಟನೆ ಹೇಳಲು ಸಮಾಧಾನ ಇದ್ದೇ ಇರುತ್ತದೆ. ಕಲ್ಯಾಣ್‌ರ ಬಾಯಿ ಕಟ್ಟಿಸುವಂತೆ ಹೇಳಿದಳು; – "ಕಲ್ಯಾಣ್‌ಜಿ ನನಗೆ ಹಠ, ಚಟ ಎರಡೂ ಮುಖ್ಯ ಇವೆರಡೂ ನನ್ನ ವ್ಯಕ್ತಿತ್ವಕ್ಕೇ ಅಂಟಿದ ಗುಣಗಳು. ಅಭಿನಯಿಸಬೇಕೆಂಬ ಚಟ ಒಂದು ಕಡೆಯಾದರೆ,... ಕನ್ನಡದ ಜನ ನನ್ನನ್ನು ಮರೆಯಬಾರದು.... ಕನ್ನಡ ಚಿತ್ರರಂಗ ನನ್ನನ್ನು ಈಗ ದೂರ ಮಾಡಿದರೇನು? ರಂಗಭೂಮಿಯಲ್ಲಿ ಅಭಿನಯಿಸುತ್ತೇನೆ. ಅದ್ಭುತ ಕಲಾವಿದೆ; ಅತ್ಯುತ್ತಮ ನಟಿ; ಸರಿಸಾಟಿ ಇಲ್ಲದವಳು.... ಎಂದೆಲ್ಲಾ ಮತ್ತೆ ಹೊಗಳಿಸಿಕೊಳ್ಳುತ್ತೇನೆ. ಯಾರೂ ಮರೆಯದ ಹಾಗೆ ಮಾಡುತ್ತೇನೆ; ಮರೆಯಲು ಅವಕಾಶವೇ ಕೊಡುವುದಿಲ್ಲ.... ಇದೇ ನನ್ನ ಹಠ.

ಅವಳಿಗೆ, ಅವಳ ಸಿಕ್ಸ್ತ್ ಸೆನ್ಸ್‌ಗೆ ಏನೆನ್ನಿಸಿತೋ ಮಾತು ನಿಲ್ಲಿಸಲಿಲ್ಲ. ಮುಂದುವರೆದು ಹೇಳಿದಳು; "ನನ್ನ ಸ್ವಂತ ಚಿತ್ರಕಥೆಯಲ್ಲಿ ನಾಯಕಿ ತುಂಬಾ ಮುದ್ದಾದ ಹುಡುಗಿ. ಮನಸೆಳೆವ ಮುಗ್ಧ ಹೆಣ್ಣು. ಅದಕ್ಕಾಗಿಯೇ ನಾನು ಹೆಲ್ತ್ ಬಗ್ಗೆ ಬಹಳ ಕೇರ್ ತಗೋಳ್ತಾ ಇದ್ದೇನೆ. ವಹಿಸುವ ಪಾತ್ರಕ್ಕೆ ಕಲಾವಿದ ಜೀವ ತುಂಬದಿದ್ದರೆ ಅವರಿದ್ದೂ ಇಲ್ಲದಂತೆ" – ಎಂದು ರೇವತಿಯವರಿಗೆ ಹೇಳಿದ್ದ ಮಾತನ್ನು ನೆನಪಿಸಿಕೊಂಡರು; ಹನಿಗಲ್ಲಾದರು. ಅವಳ ಅಭಿರುಚಿ. ಸೌಂದರ್ಯ ಪ್ರಜ್ಞೆ, ಕಲಾಪ್ರೇಮ. ಶಿಸ್ತು – ಇವುಗಳ ಬಗ್ಗೆ ಸಿನಿರಂಗದ ಎಷ್ಟೊಂದು ಮಂದಿ ಕೊಂಡಾಡಿದ್ದಾರೆ. ತನ್ನನ್ನು, ತನ್ನ ಪ್ರತಿಭೆಯನ್ನು, ತನ್ನ ಕಲಾಭಿರುಚಿಯನ್ನು ಮೆಚ್ಚಬೇಕೆಂದು ಬಯಸುತ್ತಿದ್ದಂತೆ ಬೇರೆಯವರಲ್ಲಿಯೂ ಅದನ್ನು ಗುರುತಿಸಿ, ಮುಕ್ತವಾಗಿ ಮೆಚ್ಚಿಕೊಳ್ಳುತ್ತಿದ್ದಳು. ಅವಳಿಗಿದ್ದ ಎರಡು ದೊಡ್ಡ. ಕನಸುಗಳೆಂದರೆ ಚಿತ್ರರಂಗದಲ್ಲಿ ಮಹೋನ್ನತ ಸಾಧನೆ ಮಾಡಿ ಅನನ್ಯ



ಅಭಿನೇತ್ರಿ ಎಂದು ಗುರುತಿಸಿಕೊಳ್ಳುವುದು ಮತ್ತು ಒಂದು ಭವ್ಯವಾದ ಮನೆಯನ್ನು ಕಟ್ಟುವುದು. ಎರಡನ್ನು ಸಾಧಿಸಿ ತೋರಿಸಿದಳು. ಮಾಡಬೇಕೆಂದದ್ದನ್ನು ಮಾಡಿ ತೋರಿಸುತ್ತಾಳೆ; ಮುಟ್ಟಬೇಕೆಂದುಕೊಂಡ ಗುರಿ ಮುಟ್ಟುತ್ತಾಳೆ ಇದು ಸಾಧ್ಯವಾಗುವುದು ಅವಳ ಆತ್ಮವಿಶ್ವಾಸದಿಂದ. ಅವಳು ಕಟ್ಟಿದ ಮನೆಯನ್ನು

ನೋಡಿದವರಿಗೆ ಅದು ಮನೆಯೋ ಕಲಾಭವನವೋ ಎಂಬ ಭ್ರಮೆ ಉಂಟಾದರೆ ಆಶ್ಚರ್ಯವಿಲ್ಲ. ರೇವತಿ ಅವರು ಅವಳ ಆ ಮನೆಯನ್ನು ಹೀಗೆ ವಿವರಿಸಿದ್ದಾರೆ; "ಅವಳ ಕಲಾಮಂದಿರ..... ಸ್ವಪ್ನ ಸೌಧ ಮುಗಿದಿತ್ತು..... ಕಾಲು ಒರೆಸಿಕೊಳ್ಳುವ ಫುಟ್ ರೆಸ್ಟ್‌ನಿಂದ ಹಿಡಿದು ಅಡುಗೆ ಮನೆಯ ನಲ್ಲಿಯವರೆಗೂ ಕಲೆಯ ಅಂಶ ಎದ್ದು ಕಾಣುತ್ತಿತ್ತು. ಅಂದವಾದ ಮನೆ. ಮನೆಯ ಸುತ್ತ ಅತಿ ರಮ್ಯವಾದ ಕಣ್ಣಿಗೆ ತಂಪು ನೀಡುವ ತೋಟ. ಮುಂಭಾಗದಲ್ಲಿ ಕಾರಂಜಿ. ಮನೆಯನ್ನು ಆಶೀರ್ವದಿಸುವಂತೆ ತುಳಸಿ. ಮನೆಯ ಒಳಗೆ ಕಣ್ಣು ಸೆಳೆಯುವ ಫರ್ನೀಚರ್ಸ್.... ರತ್ನ ಕಂಬಳಿ.... ಬೆಲೆ ಬಾಳುವ ತೈಲ ಚಿತ್ರಗಳು.... ಅಲಂಕಾರದ ಬೊಂಬೆಗಳು.... ಎಲ್ಲೂ ಕಾಣ ಸಿಗದ ಟೆಲಿಫೋನ್ ಇನ್ಸ್ಟ್ರುಮೆಂಟ್..... ಜ್ಞಾನದಾಹಿ ಆಗಿದ್ದ ಆಕೆಯ ಅಮೂಲ್ಯವಾದ ಪುಸ್ತಕಗಳ ಸಂಗ್ರಹ.... ಒಂದೇ.... ಎರಡೇ.... ನೋಡಿ ಸಂತೋಷಿಸಬೇಕಾದ ಸುಂದರ ಸದನ ಈ ವಿವರಣೆಯೇ ಅವಳ ಕಲಾಭಿರುಚಿಗೆ ಸಾಕ್ಷಿ. ಮನೆಯನ್ನು ಅಂದವಾಗಿ ಕಾಣಿಸಬೇಕೆಂಬುದು ಅವಳ ಅಭಿಲಾಷೆ. ಅದ್ದರಿಂದಲೇ ತನ್ನನ್ನು ತುಂಬಾ, ಗಾಡಿಯಾಗಿ ಅಲ್ಲ, ಮೆಟಿಕ್ಯುಲಸ್ ಆಗಿ ಅಲಂಕರಿಸಿಕೊಳ್ಳುತ್ತಿದ್ದಳು.

ಸಾರ್ವಜನಿಕ ಸಭೆ ಸಮಾರಂಭಗಳಲ್ಲಿಯೂ ಒಳ್ಳೆಯ ಭಾಷಣಕಾರ್ತಿ ಎಂದು ಗುರುತಿಸಿಕೊಂಡಿದ್ದಳು. ಅವಳ ಸಾಹಿತ್ಯದ ಓದು ಅವಳ ಒಂದೊಂದು ಮಾತು, ಒಂದೊಂದು ವಿಚಾರವನ್ನೂ ತೂಕಬದ್ಧ ಮತ್ತು ಅರ್ಥಪೂರ್ಣವಾಗಿಸುತ್ತಿತ್ತು.

1972ರಲ್ಲಿ ಫಿರೋಜ್ ರಂಗೂನ್‌ವಾಲಾ ಅವರು ಏರ್ಪಡಿಸಿದ್ದ ಉತ್ಸವವೊಂದಕ್ಕೆ ಕಲ್ಪನಾ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದಳು. ಅಂತೆಯೇ, 1973ರಲ್ಲಿ ಉದ್ಘಾಟನೆಯಾದ ಕಾವೇರಿ ಫಿಲಂ ಸೊಸೈಟೀಯ ಸಮಾರಂಭದಲ್ಲಿ ಕಲ್ಪನಾ ಅಧ್ಯಕ್ಷತೆ ವಹಿಸಿದ್ದಳು. ಫಿಲಂ ಸೊಸೈಟಿ ಆರಂಭವಾದದ್ದಕ್ಕೆ ಅತೀವ ಸಂತೋಷ ಪಟ್ಟಿದ್ದು ನಿಜವೆ. ಆದರೂ ಕನ್ನಡ ಚಿತ್ರೋದ್ಯಮದಲ್ಲಿ ಅನೇಕ ಸುಧಾರಣೆಗಳಾಗಬೇಕು. ಉದ್ಯಮದ ಅಭಿವೃದ್ದಿಗೆ ಪರಿಣಾಮಕಾರಿಯಾದ ಐತಿಹಾಸಿಕ ಪರಂಪರೆಯೊಂದನ್ನು ಜಗತ್ತಿಗೆ ಪರಿಚಯಿಸುವ ರೀತಿಯಲ್ಲಿ ಒಂದು ವ್ಯವಸ್ಥೆಯಾಗಬೇಕು. 'ಫಿಲಂ ಆರ್ಕೀವ್ಸ್' ಕುರಿತು ಚಿಂತನೆ ನಡೆಸಬೇಕು. ಚಿತ್ರೋದ್ಯಮದಲ್ಲಿ ದುಡಿವ ಮಂದಿಯ ಆರ್ಥಿಕ ಭದ್ರತೆಯ ಬಗ್ಗೆ ಯೋಜನೆಗಳನ್ನು ರೂಢಿಸಬೇಕು – ಎಂದೆಲ್ಲ ಆಸೆಗಳನ್ನು ಹೊಂದಿದ್ದಳು. ಒಂದು ವಿಚಾರದಲ್ಲಿ, ಭಯಂಕರ ವಿರೋಧಕ್ಕೆ ಗುರಿಯಾಗಿದ್ದಳು. ಕನ್ನಡ ಚಿತ್ರಗಳಿಗೆ ಸಬ್ಸಿಡಿಕೊಡುವುದನ್ನು ವಿರೋದಿಸಿದ್ದಳು. ಇದು ದೊಡ್ಡ ಗಲಾಟೆಗೆ ಕಾರಣವಾಗಿ ಕಲ್ಪನಾಳ ವಿರುದ್ದ ಪ್ರತಿಭಟನೆಯೂ ನಡೆಯಿತು. ಸಬ್ಸಿಡಿ ಬೇಡವೆಂದಿದ್ದರ ಹಿಂದಿನ ಉದ್ದೇಶ, ಕನ್ನಡ ಚಿತ್ರೋದ್ಯಮದ ಬಗ್ಗೆ ಕೀಳು ಅಭಿಪ್ರಾಯ ಇರಿಸಿಕೊಂಡಿದ್ದಳು ಎಂದಲ್ಲ. ಸಬ್ಸಡಿ ನೀಡುವುದರಿಂದ ಕನ್ನಡ ಚಿತ್ರಗಳ ಗುಣಮಟ್ಟ ಕಡಿಮೆಯಾಗಬಹುದೆಂಬ ಹೆದರಿಕೆ ಇತ್ತು. ಕನ್ನಡ ಚಿತ್ರೋದ್ಯಮದ ಅಭಿವೃದ್ದಿಗೆ, ತಾನು ಯಾವುದೇ ರೀತಿಯ ಸಹಾಯಕ್ಕಾಗಿ ಸಿದ್ದವಾಗಿದ್ದಳು. ಆದರೆ ಅವಳ ಬಿರುಸಿನ ಮಾತುಗಳು, ಅತಿಯಾದ ಆತ್ಮ ವಿಶ್ವಾಸದಿಂದ "ನಾನು ಬದುಕಿನಲ್ಲಿ ಎಲ್ಲ ಕಂಡೆ, ಕಲಿತೆ, ಇನ್ನು ಕಲಿಯಬೇಕಾದ್ದು ಏನೂ ಇಲ್ಲ" ಎನ್ನುವಂತ ಹೇಳಿಕೆಗಳು, ಅತಿ ಪ್ರತಿಷ್ಠೆಯ ಹೆಣ್ಣು, ದುರಹಂಕಾರದ ಪ್ರತೀಕ; ತಲೆ ಬಿರುಸಿನವಳು; ಸೊಕ್ಕಿನವಳು ಎಂಬೆಲ್ಲಾ ಆರೋಪ. ಟೀಕೆಗಳಿಗೆ ದಾರಿಯಾಯಿತು. ಗೆಳತಿ ಕಲ್ಪನಾಳಿಗೆ ತೀರ ಹತ್ತಿರವಿದ್ದ ಇನ್ನೊಬ್ಬ ಪತ್ರಕರ್ತ ಗೆಳತಿ ಪ್ರತಿಭಾ ಅವರು ಸಂಕ್ಷೇಪವಾಗಿ ಕಲ್ಪನಾಳ ಸಮಗ್ರ ವ್ಯಕ್ತಿತ್ವವನ್ನು ಈ ರೀತಿ ವಿವರಿಸಿದ್ದಾರೆ; "ಬಯಕೆ. ಆದರ್ಶ – ಮಹತ್ವವನ್ನು ಸಾಧಿಸುವ ಛಲ ಇದ್ದ ಹೆಣ್ಣು ಮಗಳು ಆಕೆ, ಸಾಧನೆಯ ಯಶಸ್ಸು ಉಂಡಷ್ಟೂ ತೃಪ್ತಿ ಕಾಣದ ಆಕೆಯ ಚೇತನ ಮತ್ತಷ್ಟು ಬಾಚಿಕೊಳ್ಳಲು ಧಾವಿಸುತ್ತಿತ್ತು. ಆಕೆಯದು ಬಾರಿ ಹುಮ್ಮಸ್ಸಿನ ಜೀವ. ಮುನ್ನುಗ್ಗುವ ಭರದಲ್ಲಿ ಮೈ ನುಗ್ಗಾಗುತ್ತಿರುವುದು – ಮನದ

ಮಾರ್ದವತೆಗೆಲ್ಲೋ ಮುಕ್ಕು ಬರುತ್ತಿದೆ. ಎಂದು ಯೋಚಿಸಿಯೇ ಇರಲಿಲ್ಲ! ಹೊಸದು, ಇನ್ನೂ ಹೊಸದು – ಚೆಂದ, ಇನ್ನೂ ಚೆಂದ ಎಂದು ಓಡುತ್ತಿದ್ದ ಆಕೆಯ ಬದುಕಿನಲ್ಲಿ ನಿಕಟವರ್ತಿಗಳು ಹಲವರಿದ್ದರು." ಎಂದು.

ಕಲ್ಪನಾ ನನ್ನ ಕಣ್ಣಲ್ಲಿ, ನನ್ನ ಅನುಭವದಲ್ಲಿ ಒಬ್ಬರ ಗ್ರಹಿಕೆಗಾಗಲೀ, ಒಂದು ಸಮಗ್ರ ವ್ಯಕ್ತಿತ್ವದ ಊಹೆಗಾಗಲೀ ಸಿಗುವಂಥವಳಲ್ಲ. ವಿರೋಧಾಭಾಸಗಳ. ವೈವಿಧ್ಯಗಳ ಒಂದು ಮೊತ್ತ ಚತುರ್ಮುಖ ಪ್ರತಿಭೆಯ, ಅಸಂಖ್ಯ ಚಿತ್ತ ಸ್ಥಿತಿಗಳ ವೈವಿಧ್ಯಮಯ ಸದಭಿರುಚಿಗಳ, ರೋಷ– ದ್ವೇಷಗಳ – ಬಿರುಸು ಬಿನ್ನಾಣಗಳ –ಗಡಸು ಗಾಂಭಿರ್ಯಗಳ – ಕಠೋರತೆ – ಮಾರ್ದವತೆಗಳ ಒಂದು ಸಂಕೀರ್ಣ ಚೇತನವಾಗಿದ್ದಳು.

ಯಾರಿಗೇ ಆಗಲಿ. ಅವಳನ್ನು ಅರಿತು ಸ್ನೇಹ ಪಡೆಯಲು ಒಂದು ವಿಶೇಷ ಗುಣ, ಜಾಣ್ಮೆಗಳಿರಬೇಕಾದ್ದು ಅನಿವಾರ್ಯ.

'ಎ ನ್ಯೂ ಸ್ಟಾರ್ ಬಾರ್ನ್' ಎಂಬಂತೆ ಚಿತ್ರಜಗತ್ತನ್ನು ಪ್ರವೇಶಿಸಿದ ಕಲ್ಪನಾಳ ಅಭಿನಯ ದೇಶದ ಯಾವುದೇ ಭಾಷೆಯಲ್ಲಿನ ಎಂತಹ ದೊಡ್ಡ ಅಭಿನೇತ್ರಿಗೂ ಕಡಿಮೆಯಿರಲಿಲ್ಲ. ದೊರೆತ ಪಾತ್ರಗಳೆಲ್ಲವೂ ಅತಿಯಾದ ಭಾವಪೂರ್ಣ ಅಭಿನಯವನ್ನು ಬಯಸುತ್ತಿದ್ದಂತಹವು. ಆಕಸ್ಮಿಕವೋ ಕಾಕತಾಳೀಯವೋ ಎಂಬಂತೆ ಕನ್ನಡದ ಹೆಸರಾಂತ ಕಾದಂಬರಿಗಾರ್ತಿಯ ಕಾದಂಬರಿಗಳಲ್ಲಿನ ಕಥಾಪಾತ್ರಗಳು ಇವಳ ಬರವಿಗಾಗಿಯೇ ಕಾದಿದ್ದಂತೆ, ಬರುತ್ತಿದ್ದಂತೆ ಕಲ್ಪನಾಳ ಮೂಲಕ ಜೀವ ಪಡೆದು ತೆರೆಯ ಮೇಲೆ ಕಾಣಿಸಿಕೊಂಡು ಮರುಕ, ದುಃಖ ಚಪ್ಪಾಳೆಗಳನ್ನು ಗಿಟ್ಟಿಸಿಕೊಂಡವು. ಕೇವಲ ಸಾಹಿತ್ಯಾಸಕ್ತರಿಗೆ ಮಾತ್ರ ಪರಿಚಯವಿದ್ದ ತ್ರಿವೇಣಿ ಕಲ್ಪನಾಳ ಮೂಲಕ ಅಸಂಖ್ಯಾತ ಕನ್ನಡಿಗರ ಎದೆಯಾಳದಲ್ಲಿ ಅಚ್ಚಳಿಯದೆ ಉಳಿದು ಬಿಟ್ಟರು. ಕಾದಂಬರಿಗಳಲ್ಲಿ ಪಾತ್ರಗಳು ನಿರೀಕ್ಷಿಸುವ ಭಾವನಾತ್ಮಕ ಅಭಿನಯ ಕೇವಲ ಕಲ್ಪನಾಗೆ ಮಾತ್ರ ಸಾಧ್ಯವಾಯಿತು. ಕಲ್ಪನಾ ತ್ರಿವೇಣಿ – ಪುಟ್ಟಣ್ಣ – ಈ ಮೂವರೂ ಅನನ್ಯ ಬೆಸುಗೆಯ ಮೂರು ತತ್ವಗಳಾದರು; ಪರಿಕಲ್ಪನೆಗಳಾದರು. ಸುಮಾರು ಒಂದೂವರೆ ದಶಕಕ್ಕೂ ಮೀರಿ ಚಿತ್ರ ಜಗತ್ತನ್ನು ಆಳಿದ ಕಲ್ಪನಾಗೆ, ಚಿತ್ರೋದ್ಯಮದಿಂದ ಸಲ್ಲಬೇಕಾಗಿದ್ದ ಗೌರವ ಸಲ್ಲದೆ ಹೋದದ್ದು ವಿಚಿತ್ರ, ವಿಪರ್ಯಾಸ, ಬದುಕಿನ ಗುಟ್ಟೂ ಬಿಟ್ಟುಕೊಡದಂತೆ ಸಾವಿನ ಗುಟ್ಟು ಬಿಟ್ಟುಕೊಡದೆ ಸಾವನ್ನಪ್ಪಿದಳು. ಸಾಯುತ್ತಿದ್ದಂತೆ ಮಂದಿ ಏನೋ ಬಂದರು. ನಿರೀಕ್ಷೆಗೂ ಮಿಗಿಲಾಗಿ ಕಂಬನಿಯ ಕೋಡಿ ಹರಿಸಿದರು. ಸಾವಿನ ನಿಗೂಢತೆಯ ಬಗ್ಗೆ ಊಹಾ ಪೋಹಗಳ ಮಾತನ್ನಾಡಿದರು. ಆದರೆ ಒಗ್ಗಟ್ಟಾಗೀ; ನಿಂತು ಸಾವಿನ ಒಗಟನ್ನು ಬಿಡಿಸುವ ಪ್ರಯತ್ನ ಮಾಡದೆ

ಅಸಹಾಯಕರಂತೆ, ಅಸಮರ್ಥರಂತೆ ಕೈ ಕಟ್ಟಿ ನಿಂತಿದ್ದರು. ಅವರಲ್ಲಿ ನಿಜವಾಗಿ ಸಂತಪ್ತರು ಎಷ್ಟು ಮಂದಿಯೋ! ಸಂತೃಪ್ತರು ಎಷ್ಟು ಮಂದಿಯೇ! –ಯಾರಿಗೆ ಗೊತ್ತು?

ಕೊನೆಯ ದಿನಗಳಲ್ಲಿ ಅವಳಲ್ಲಿ ಯಾವುದೋ ಒಂದು ಬಗೆಯ ಕಾಂಪ್ಲೆಕ್ಸ್ ಮೊಳೆದಿತ್ತು. ಯಾರಿಗೂ ತಾನು ಬೇಡವಾಗಿದ್ದೇನೆ; ತನ್ನನ್ನು ಯಾರೂ ಕರೆಯುತ್ತಿಲ್ಲವೇಕೆ? ನನ್ನ ಅಭಿನಯದಲ್ಲಿ ಭರವಸೆ ಇಲ್ಲವಾಯಿತೇ? ಇಲ್ಲವೇ ನನ್ನ ಬಗ್ಗೆ ಅಸೂಯೆಯೇ? ನನ್ನನ್ನು ಪೂರ್ತಿಯಾಗಿ ನಾಶಮಾಡಬೇಕೆಂಬ ಪಿತೂರಿಯೇ? – ಎಂದೆಲ್ಲಾ ಯೋಚಿಸುತ್ತಿದ್ದಳು. ನನ್ನ ಬಳಿ ಎಷ್ಟೋ ಸಲ ಹೇಳಿಕೊಂಡು ಎಳೆಯ ಮಗುವಿನಂತೆ ಬಿಕ್ಕುತ್ತಿದ್ದಳು. 'ಶರಪಂಜರ ಚಿತ್ರದಲ್ಲಿನ ಅಭಿನಯದಿಂದ ಉಂಟಾದ ಆಘಾತದಿಂದ ಅವಳು ತತ್ತರಿಸಿದ ರೀತಿ ಅವಳ ಮನೆಯವರಿಗೆ, ನಮಗೆ ತುಂಬಾ ಕಳವಳಕಾರಿ ಅನಿಸಿತ್ತು. ಅಷ್ಟೊಂದು ಅವಳ ಪಾತ್ರ ತಲ್ಲೀನತೆಯೇ ಅವಳನ್ನು ಚಿತ್ರರಂಗದಲ್ಲಿ ವಿಭಿನ್ನವಾಗಿ. ವಿಶೇಷವಾಗಿ ಉಳಿಸಿದ್ದು. ಬೇರೆ ಯಾವ ತಾರೆಗೂ ಅವಳ ಅಭಿನಯ ಶೈಲಿಯನ್ನು ದಕ್ಕಿಸಿಕೊಳ್ಳುವುದು ಸುಲಭವಾಗಿರಲಿಲ್ಲ.

ಇಷ್ಟು ಸಮರ್ಥ ಅಭಿನೇತ್ರಿಯ ಬಗ್ಗೆ ಭಿನ್ನಾಭಿಪ್ರಾಯಗಳು. ವಿವಾದಗಳು ಸೃಷ್ಟಿಯಾಗಿ ಮಾನಸಿಕ ತಲ್ಲಣಕ್ಕೆ ದೂಡಿದ್ದು. ಅವಳ ಬಗೆಗಿನ ತಪ್ಪು ಕಲ್ಪನೆಗಳೇ ಆಗಿವೆ. ಚಿತ್ರರಂಗದ ಮತ್ತೊಬ್ಬರ ಪ್ರಕಾರ, ಅವಳ ಖಾಸಗಿ ಜೀವನದಲ್ಲಿ ಸುಖ ಸಾಧ್ಯವಾಗದೆ ಇದ್ದದ್ದು ಅವಳ ತಪ್ಪುಗಳಿಂದಲ್ಲ; ಬದಲಾಗಿ ಉದ್ಯಮದ ಶೋಷಣೆಯೇ ಇದಕ್ಕೆ ಕಾರಣ. ಅವಳ ಸಾಂಗತ್ಯ. ದಾಂಪತ್ಯ ಬಯಸಿ ಬಂದವರಿದ್ದರೂ, ದಾಂಪತ್ಯದ ಬಗ್ಗೆ ಅವಳು ತಳೆದಿದ್ದ ನಿಲುವುಗಳು. ಪುರುಷನಿಂದ ನಿರೀಕ್ಷಿಸಿದ ಬದ್ಧತೆ – ಬಹುಶಃ ಯಾರೂ ಅವಳಿಗೆ ಸ್ವೀಕಾರಾರ್ಹ ಎನಿಸಿರಲಿಲ್ಲವೇನೋ. ಆದರೆ ಒಬ್ಬರೇ ಒಬ್ಬ ವ್ಯಕ್ತಿ ಬದುಕಿನಲ್ಲಿ ಪ್ರವೇಶಿಸುವ ಸಿದ್ಧತೆ ನಡೆಯುತ್ತಿದ್ದಂತೆ, ಸಂಭವಿಸಿದ ಅನೇಕ ಘಟನೆಗಳು, ಅವಳ ಬಾಳಿನ ತಿರುವುಗಳು – ಅವಳನ್ನು ಎಲ್ಲಿಗೋ ಕರೆದೊಯ್ದು ನಿಲ್ಲಿಸಿತು.

ದ್ವೇಷ, ಅಸೂಯೆ, ಸೇಡಿನ ಮನಸುಗಳು ಸಾವಿನ ದುರಂತದಿಂದ ಆತ್ಮ ವಿಶ್ಲೇಷಣೆ ಮಾಡಿಕೊಂಡು, ಕಲ್ಪನಾಳ ಕನಸುಗಳನ್ನು ಮೌಲ್ಯಗಳನ್ನು ಆದರ್ಶಗಳನ್ನು, ಕಠೋರ ನುಡಿಗಳ ಹಿಂದಿನ ಮಾರ್ದವತೆ, ಮಮಕಾರಗಳನ್ನು ಅರ್ಥಮಾಡಿಕೊಂಡು ಭಾವ ಪೂರ್ಣ ಶ್ರದ್ಧಾಂಜಲಿಗೆ ಮುಂದಾದಾರು. ಎಂದು ಮನಸ್ಸಿನಲ್ಲಿ ಹಾರೈಸಿದೆ.

ಕಲ್ಪನಾ.... ಕಲ್ಪನಾ... ಯೋಚಿಸಿದಷ್ಟೂ, ಅಂಗುಲಂಗುಲವಾಗಿ ನನ್ನೆಲ್ಲ ಇಂದ್ರಿಯಗಳನ್ನು ತುಂಬಿಕೊಳ್ಳುತ್ತಿದ್ದಾಳೆ. ಸಾವಿನಲ್ಲೂ ಅವಳು ಸುಖವಾಗಿದ್ದಿರಲಾರಳು. ಅವಳ ನೆನಪಿನೊಂದಿಗೆ. ಅವಳು ನರಳುವ ಧ್ವನಿ ಕೇಳಿಸುತ್ತದೆ. ಮರುಕ್ಷಣದಲ್ಲಿಯೇ ವಿಕಟ ನಗೆಯೊಂದು ಸ್ಫೋಟಗೊಳ್ಳುತ್ತದೆ. ಅದರ ಹಿಂದೆಯೇ ಬಿಕ್ಕಿ ಬಿಕ್ಕಿ ಅಳುತ್ತಿರುವುದು ಕೇಳಿಸುತ್ತದೆ; ಅದೇ 'ಶರಪಂಜರ'ದ ಡೈಲಾಗ್..... ನಾನು ಬಂದೆ.... ನಾನು ನೋಡಿದೆ...... ನಾನು ಗೆದ್ದೆ! ಪದೇ ಪದೇ ಈ ವಾಕ್ಯಗಳು ಅನುರಣಿಸಿದವು. ನನಗೆ ಇವು ಸಿನಿಮಾ ಡೈಲಾಗ್ ಅನಿಸಲಿಲ್ಲ. ತನ್ನ ಬಗ್ಗೆಯೇ ಹೇಳುತ್ತಿದ್ದಾರೆ. ಒಂದೊಂದೂ ಆ ಪುಟ್ಟವಾಕ್ಯಗಳು ಅನೇಕ ಅರ್ಥಗಳನ್ನು ತುಂಬಿಕೊಂಡಿದ್ದವು. ಈ ಪ್ರಪಂಚಕ್ಕೆ, ಮಾತೃಗರ್ಭದಿಂದ ಪ್ರವೇಶ ಮಾಡುತ್ತೇವೆ. ಪ್ರಪಂಚದಲ್ಲಿ ಹುಟ್ಟುವುದೆಂದರೆ, ಅನೇಕ ಬಗೆಯ ಅನುಭವಗಳಿಗೆ ತೆರೆದುಕೊಳ್ಳುವುದು;

ಮುಖಾಮುಖಿಯಾಗುವುದು. ಭಾವಿಸುವಷ್ಟು ಬದುಕು ಸರಳವಿಲ್ಲ; ನೇರವಲ್ಲ. ಸಮತಟ್ಟಾದುದಲ್ಲ. ಏರಿಳಿತಗಳು; ಸಂಘರ್ಷಗಳು; ನೋವು ದುಃಖ ಯಾತನೆ ನಂಜು – ಇವುಗಳೇ ಜಾಸ್ತಿ. ನಲಿವಿನ ಕ್ಷಣಗಳು. ಸುಖದ ಸನ್ನಿವೇಶಗಳು ಅಪರೂಪ. ಗುಡ್ಡ ಬೆಟ್ಟ, ಕಾಡು, ಮೇಡು, ಮುಳ್ಳು ಕಡ್ಡಿಯ ಹಾದಿಗಳು; ಸುಡುವ ಬೆಂಕಿ ಬೇಸಿಗೆಗಳು..... ಇನ್ನೂ ಏನೇನೋ.... ಹಾದು ಹಾದು ಸಾಗಿ – ದೂರ– ದೂರ ನಡೆದಾಗಲ್ಲೋ.... ಒಂದಷ್ಟು ನೆರಳು.... ಇನಿದನಿಯ ಕೊರಳು..... ಮತ್ತೆಲ್ಲಾ ಸಂಘರ್ಷಗಳೇ! ಅಸ್ತಿತ್ವಕ್ಕಾಗಿ, ಅನನ್ಯತೆಗಾಗಿ, ಹಕ್ಕಿಗಾಗಿ, ಅವಕಾಶಕ್ಕಾಗಿ ಹೋರಾಡಲೇ ಬೇಕು; ಗುದ್ದಾಡಲೇ ಬೇಕು. ಈ ಗುದ್ದಾಟದಲ್ಲಿ, ಗುಜ್ಜಾಗುವುದೆಷ್ಟೋ? ಗುರಿ ಮುಟ್ಟುವುದೆಷ್ಟೋ?!.... ಈ ರೀತಿಯ ಜಗತ್ತನ್ನೇ ಕಂಡದ್ದು!!!

ಇಂತಹ ಸಂಘರ್ಷಗಳಲ್ಲಿ, ಹೋರಾಟಗಳಲ್ಲಿ ಗೆಲ್ಲುವುದೆಂದರೇನು? ಗೆಲುವು ಭೌತಕವೋ ಆಕಸ್ಮಿಕವೋ?

ಬಯಸಿದ್ದನ್ನು, ಗುರಿಯಾಗಿಸಿಕೊಂಡದ್ದನ್ನು ಸಾಹಸಗಳ ಮೂಲಕ ಸಾಧನೆಗಳ ಮೂಲಕ ಯಶಸ್ಸಿನ ಶಿಖರಾಗ್ರವನ್ನು ತಲುಪುವುದೂ ಒಂದು ಬಗೆಯ ಗೆಲುವು. ಈ ಗೆಲುವಿನ ಸಂತಸ ಕೆಲವರ ಪಾಲಿಗೆ ಭೌತಿಕ ಬದುಕಿನ ಅವಧಿಯಲ್ಲಿಯೇ ಸಾಧ್ಯವಾಗುತ್ತದೆ. ಮತ್ತೆ ಕೆಲವರಿಗೆ ಯಶಸ್ಸಿನ ಶಿಖರಾಗ್ರದಲ್ಲಿ ನಿಂತ ಚೇತನವಾದರೂ ಸುತ್ತಲಿನ ಕ್ಷುದ್ರ, ಕ್ಷುಲ್ಲಕ ಮನಸ್ಸುಗಳಿಗೆ ಗ್ರಹಿಸಲಾಗದೆ, ಗೆದ್ದವರ ಗೆಲುವಿನ ಸವಿಯಮೃತದಲ್ಲಿ ಹುಳಿ ಹಿಂಡಿ, ಗೆಲುವನ್ನೂ ಗುರುತಿಸಲಾಗದ ಅಸಹಾಯಕತೆಗೆ ದೂಡುತ್ತವೆ. ಬದುಕನ್ನೇ

ಅಸಹನೀಯವಾಗಿಸಿ. ಭೌತಿಕ ಕಾಯವನ್ನು ಬೆಂಕಿಗೆ ಎಸೆವ ದುರಂತಕ್ಕೆ ಪ್ರೇರೇಪಿಸುತ್ತಾರೆ. ಇದರಿಂದ ಶರಪಂಜರದಂತಹ ದೇಹದಿಂದ ಸೂಕ್ಷ್ಮರೂಪಿ ಚೇತನ ಬಿಡುಗಡೆಯ ಸಂಭ್ರಮದೊಂದಿಗೆ ಗೆಲುವಿನ ಸಂತಸವನ್ನೂ ಅನುಭವಿಸುತ್ತದೆ. ಕಲ್ಪನಾ ಸಾವಿನ ಮೂಲಕ ಕೋಟಿ ಕೋಟಿ ಅಭಿಮಾನಿಗಳ ಹೃದಯಗಳನ್ನು ಗೆದ್ದಿದ್ದಾಳೆ.

ಕಲ್ಪನಾ,

ನೀನೆಲ್ಲಿದ್ದೀಯೋ, ಹೇಗಿದ್ದೀಯೋ, ನಿನ್ನ ಸಾವಿಗೆ ನಾನೇ ಸಾಕ್ಷಿ. ನೀನಿದ್ದಾಗ ಹೇಗೋ ನನಗೆ ಗೊತ್ತಿಲ್ಲ. ನೀನಿಲ್ಲದೇ ಹೋದಾಗ, ನಿನ್ನ ಅಭಿಮಾನಿಗಳು ಸಾಗರೋಪಾದಿಯಲ್ಲಿ ಬಂದು ನೆರೆದು, ನಿನ್ನ ಸಾವಿಗೆ, ಬದುಕಿನ ವಿದಾಯಕ್ಕೆ ನಡೆದುಕೊಂಡದ್ದನ್ನು ಒಂದಿಷ್ಟು ವಿವರಿಸುತ್ತೇನೆ; ಆಗಲಾದರೂ ನಿನ್ನಲ್ಲಿ ಇದ್ದಿರಬಹುದಾದ ಕಹಿಭಾವನೆಗಳು; ಉದ್ವಿಗ್ನತೆ ಅಸಂತೃಪ್ತಗಳು ತಣಿದಾವು; – ಕಲ್ಪನಾ, ನಿನ್ನ ಚೈತನ್ಯ ರಹಿತ ದೇಹವನ್ನು ಎಷ್ಟು ಸುಂದರವಾಗಿ, ಕೆಂಪು ಜರತಾರಿ ಸೀರೆ, ಹಣೆ ತುಂಬ ಅರಿಶಿನ ಕುಂಕುಮ, ಮುಡಿ ತುಂಬ ಮಲ್ಲಿಗೆಯ ದಿಂಡುಗಳು, ಮೂಗುತಿ, ಕಿವಿಯೋಲೆಗಳಿಂದ ನವವಧುವಿನಂತೆ ಸಿಂಗರಿಸಿ, ಗಂಧದ ಚೆಕ್ಕೆಗಳಿಂದ ರಚಿಸಿದ ಚಿತೆಯ ಮೇಲೆ ಮಲಗಿಸಿದ್ದರು. ನಿನ್ನ ಪ್ರೀತಿಯ ಕಲ್ಯಾಣ್ ದಂಪತಿ, ನಿನ್ನಭಿಮಾನಿ, ಚಿತ್ರರಂಗದಲ್ಲಿ ನಿನ್ನನ್ನು ಅಭಿನಯ ಶಿಲ್ಪವಾಗಿ ರೂಪಿಸಿದ ರೂವಾರಿ ಪುಟ್ಟಣ್ಣ. ನಿನ್ನ ಆಪ್ತಗೆಳತಿಯರು. ನಿರ್ದೇಶಕರು. ನಿರ್ಮಾಪಕರು, ನಿನ್ನ ಸಹನಟರು ಎಲ್ಲಕ್ಕಿಂತ ಹೆಚ್ಚಾಗಿ ಕಂಗಾಲಾದ ಕೋಟಿ ಕೋಟಿ ಕಂಗಳಿಂದ ಕಂಬನಿಯ ತರ್ಪಣವನ್ನೀಯುತ್ತಾ ಅಸಹನೀಯ ಯಾತನೆಯನ್ನು ಅನುಭವಿಸುತ್ತಾ ಮೈಲಿಗಟ್ಟಲೆ ದೂರದವರೆಗೂ ನಿಂತ ನಿನ್ನ ಅಭಿಮಾನಿಗಳು!! ಅವರೆಲ್ಲರ ಎದೆಯಲ್ಲಿ ಮೂಡಿ ನಿಂತ ನಿನ್ನ ಬಿಂಬ ಚಿರಂತನ. ಅವರು ತೋರಿದ ಪ್ರೀತಿ ಅಭಿಮಾನಕ್ಕಿಂತ ಬೇರೇನು ಬೇಕು. ಬಿರುದು ಸನ್ಮಾನ.

ಗೆಳತಿ. ಜೀವನನಾಟಕದ ತೆರೆ ಬಿದ್ದಿದೆ. ನೀನು ಜಗದ ರಂಗಭೂಮಿಯಿಂದ ನಿರ್ಗಮಿಸಿದ್ದಿ. ಆದರೆ ಜೀವಕ್ಕೆ ಇದೇ ಕೊನೆಯ ಲ್ಲ, ಬೇರೆ ಬೇರೆ ಪಾತ್ರಗಳು ನಿನಗಾಗಿ ಕಾದಿವೆ. ನೀ ಬರುವೆ; ಮತ್ತೆ ಬರುವೆ; ಎಂಬ ನಿರೀಕ್ಷೆ ನಮ್ಮದು.



# ಕಲ್ಪನಾ ಗೀತ ಲಹರಿ

| ಕ್ರಮ ಸಂಖ್ಯೆ | ಹಾಡಿನ ಮೊದಲ ಸಾಲು | ಗಾಯಕರು | ಸಿನಿಮಾ, ತೆರೆ ಕಂಡ ವರ್ಷ |
|---|---|---|---|
| 1. | ಉಡುಗೊರೆಯೊಂದ | ಎಸ್. ಜಾನಕಿ | ನಾಂದಿ (1964) |
| 2. | ಸಂಗೀತಪ್ರಿಯ ನಮ್ಮ | ಪಿ.ಲೀಲ | ಶ್ರೀ ಕನ್ನಿಕಾ ಪರಮೇಶ್ವರಿ ಕಥೆ (1966) |
| 3. | ಕರ್ನಾಟಕ ಸಾಮ್ರಾಜ್ಯ | ಸೂಲಮಂಗಲಂ ರಾಜಲಕ್ಷ್ಮೀ | ಪದವೀಧರ (1967) |
| 4. | ಮೂಡಲ ಮನೆಯ | ಎಸ್. ಜಾನಕಿ | ಬೆಳ್ಳಿ ಮೋಡ (1967) |
| 5. | ನೀ ನಡೆವ ಹಾದಿಯಲ್ಲಿ | ಪಿ. ಸುಶೀಲ | ಬಂಗಾರದ ಹೂವು (1967) |
| 6. | ನೀನೆಲ್ಲಿ ಹೋಗುವೆ | ಎಲ್.ಆರ್. ಈಶ್ವರಿ | ಧನ ಪಿಶಾಚಿ (1967) |
| 7. | ಕನ್ನಡದ ಕುಲತಿಲಕ | ಎಸ್. ಜಾನಕಿ | ಇಮ್ಮಡಿ ಪುಲಕೇಶಿ (1967) |
| 8. | ಮುಗುಳು ನಗೆಯಾ | ಪಿ. ಸುಶೀಲ | ಪ್ರೇಮಕ್ಕೂ ಪರ್ಮಿಟ್ಟೆ (1967) |
| 9. | ಉಂಡಾಡಬಹುದು | ಪಿ.ಸುಶೀಲ | ಸರ್ವಮಂಗಳಾ (1968) |
| 10. | ಹೂವು ಚೆಲುವೆಲ್ಲಾ | ಪಿ.ಸುಶೀಲ | ಹಣ್ಣೆಲೆ ಚಿಗುರಿದಾಗ (1968) |
| 11. | ನೀನಿದ್ದರೇನು ಹತ್ತಿರ | ಪಿ.ಸುಶೀಲ | ಆನಂದಕಂದ (1968) |
| 12. | ನುಡಿಯ ಹಗರಣ | ಪಿ.ಸುಶೀಲ | ಅಣ್ಣ ತಮ್ಮ (1968) |
| 13. | ಇದೇನ ಸಭ್ಯತೆ ಇದೇನ | ಪಿ.ಸುಶೀಲ | ಮಣ್ಣಿನ ಮಗ (1968) |
| 14. | ಕಣ್ಣುಗಳ ಅಂಗಳದಿ | ಎಲ್.ಆರ್. ಈಶ್ವರಿ | ಒಡಹುಟ್ಟಿದವರು (1969) |
| 15. | ಮನಸೇ.. ನಗಲೇಕೆ | ಎಸ್.ಜಾನಕಿ | ನಮ್ಮ ಮಕ್ಕಳು (1969) |
| 16. | ಅಮ್ಮ ನಿನ್ನ ತೋಳೆ | ಪಿ.ಸುಶೀಲ | ಕಪ್ಪು ಬಿಳುಪು (1969) |
| 17. | ದೋಣಿಯೊಳಗೆ | ಪಿ.ಸುಶೀಲ | ಉಯ್ಯಾಲೆ (1969) |

| | | |
|---|---|---|
| 18. ನನ್ನಂದ ನಿನಗೇ.. ಚೆನ್ನ | ಎಸ್.ಜಾನಕಿ | ಕಾಣಿಕೆ (1969) |
| 19. ಮನೆಯೇ ಬೃಂದಾವನ | ಬಿ.ಕೆ. ಸುಮಿತ್ರ | ಬೃಂದಾವನ (1969) |
| 20.ಗಗವು ಎಲ್ಲೋ... | ಎಸ್.ಜಾನಕಿ | ಗೆಜ್ಜೆಪೂಜೆ(1970) |
| 21.ಅರಿಶಿನ ಕುಂಕುಮ | ಎಸ್.ಜಾನಕಿ | ಅರಿಶಿನ ಕುಂಕುಮ (1970) |
| 22.ಜನುಮದಿನ.. ಜೇನಾ | ಬಿ. ವಸಂತ | ಪ್ರತೀಕಾರ (1970) |
| 23.ತಾಜಾ ತಾಜಾ | ಎಸ್.ಜಾನಕಿ | ಕರುಳಿನ ಕರೆ (1970) |
| 24.ಬರೆದೆ ನೀನು | ಎಸ್.ಜಾನಕಿ | ಸೀತಾ (1970) |
| 25.ಬೀಳಿಗಿರಿ ರಂಗಯ್ಯ | ಪಿ.ಸುಶೀಲ | ಶರಪಂಜರ (1971) |
| 26.ಕಂಡು ಕಂಡು ನೀ | ಎಸ್.ಜಾನಕಿ | ಭಲೇ ಅದೃಷ್ಟವೋ ಅದೃಷ್ಟ (1971) |
| 27.ಮಂಗಳದ ಈ ಸುದಿನ | ಎಸ್.ಜಾನಕಿ | ನಾ ಮೆಚ್ಚಿದ ಹುಡುಗ (1972) |
| 28.ಗೋಪಿಲೋಲ.. ಹೇ | ಪಿ. ಸುಶೀಲ | ನಾರಿ ಮುನಿದರೆ ಮಾರಿ (1972) |
| 29.ಮಧುರ ಮುರಳಿಲೋಲ | ಪಿ.ಸುಶೀಲ | ಯಾವ ಜನ್ಮದ ಮೈತ್ರಿ (1972) |
| 30.ಪೂಜಿಸಲೆಂದೇ ಹೂ | ಎಸ್.ಜಾನಕಿ | ಎರಡು ಕನಸು (1974) |



# ಕಲ್ಪನಾ ಅಭಿನಯಿಸಿದ ಚಿತ್ರಗಳು

| ಕ್ರಮ ಸಂಖ್ಯೆ | ಚಿತ್ರದ ಹೆಸರು | ತೆರೆ ಕಂಡ ವರ್ಷ |
|---|---|---|
| 1. | ಸಾಕು ಮಗಳು | (1963) |
| 2. | ಚಿನ್ನದ ಗೊಂಬೆ | (1964) |
| 3. | ನಾಂದಿ | (1964) |
| 4. | ಕವಲೆರಡು ಕುಲವೊಂದು | (1965) |
| 5. | ಮಂತ್ರಾಲಯ ಮಹಾತ್ಮೆ | (1966) |
| 6. | ಬಾಲನಾಗಮ್ಮ | (1966) |
| 7. | ಶ್ರೀ ಕನ್ನಿಕಾಪರಮೇಶ್ವರಿ ಕಥೆ | (1966) |
| 8. | ಪದವೀಧರ | (1967) |
| 9. | ಬೆಳ್ಳಿಮೋಡ | (1967) |
| 10. | ಬಂಗಾರದ ಹೂವು | (1967) |
| 11. | ಧನಪಿಶಾಚಿ | (1967) |
| 12. | ಇಮ್ಮಡಿ ಪುಲಿಕೇಶಿ | (1967) |
| 13. | ಪ್ರೇಮಕ್ಕೂ ಪರ್ಮಿಟ್ಟೆ | (1967) |
| 14. | ಗಾಂಧಿನಗರ | (1968) |
| 15. | ಮಹಾಸತಿ ಅರುಂಧತಿ | (1968) |
| 16. | ಸರ್ವಮಂಗಳಾ | (1968) |
| 17. | ಹಣ್ಣೆಲೆ ಚಿಗುರಿದಾಗ | (1968) |
| 18. | ಆನಂದಕಂದ | (1968) |
| 19. | ಅಣ್ಣ ತಮ್ಮ | (1968) |
| 20. | ಹೂವು-ಮುಳ್ಳು | (1968) |
| 21. | ಮಣ್ಣಿನ ಮಗ | (1968) |
| 22. | ಒಡಹುಟ್ಟಿದವರು | (1969) |
| 23. | ನಮ್ಮ ಮಕ್ಕಳು | (1969) |
| 24. | ಕಪ್ಪು ಬಿಳುಪು | (1969) |

| | | |
|---|---|---|
| 25. | ಉಯ್ಯಾಲೆ | (1969) |
| 26. | ಮಾತೃಭೂಮಿ | (1969) |
| 27. | ಕಾಣಿಕೆ | (1969) |
| 28. | ಮುಕುಂದ ಚಂದ್ರ | (1969) |
| 29. | ಬೃಂದಾವನ | (1969) |
| 30. | ಗೆಜ್ಜೆಪೂಜೆ | (1970) |
| 31. | ಅರಿಶಿಣ ಕುಂಕುಮ | (1970) |
| 32. | ಅನಿರೀಕ್ಷಿತ | (1970) |
| 33. | ಪ್ರತೀಕಾರ | (1970) |
| 34. | ಕರುಳಿನ ಕರೆ | (1970) |
| 35. | ವಾಗ್ದಾನ | (1970) |
| 36. | ನಮ್ಮ ಮನೆ | (1970) |
| 37. | ಸೀತಾ | (1970) |
| 38. | ದೇವರ ಮಕ್ಕಳು | (1970) |
| 39. | ಒಂದೇ ಕುಲ ಒಂದೇ ದೈವ | (1971) |
| 40. | ಶರಪಂಜರ | (1971) |
| 41. | ಭಲೇ ಅದೃಷ್ಟವೋ ಅದೃಷ್ಟ | (1971) |
| 42. | ಮುಕ್ತಿ | (1971) |
| 43. | ಸೋತು ಗೆದ್ದವಳು | (1971) |
| 44. | ನಾರಿ ಮುನಿದರೆ ಮಾರಿ | (1972) |
| 45. | ಸುಭದ್ರಾ ಕಲ್ಯಾಣ | (1972) |
| 46. | ಉತ್ತರ ದಕ್ಷಿಣ | (1972) |
| 47. | ಯಾವ ಜನ್ಮದ ಮೈತ್ರಿ | (1972) |
| 48. | ನಾ ಮೆಚ್ಚಿದ ಹುಡುಗ | (1972) |
| 49. | ಮರೆಯದ ದೀಪಾವಳಿ | (1972) |
| 50. | ಬಿಡುಗಡೆ | (1973) |
| 51. | ತ್ರಿವೇಣಿ | (1973) |
| 52. | ಗಂಧದ ಗುಡಿ | (1973) |
| 53. | ಕೆಸರಿನ ಕಮಲ | (1973) |
| 54. | ಎರಡು ಕನಸು | (1974) |
| 55. | ದಾರಿ ತಪ್ಪಿದ ಮಗ | (1975) |
| 56. | ಬೆಳುವಲದ ಮಡಿಲಲ್ಲಿ | (1975) |

| | | |
|---|---|---|
| 57. | ನಿರೀಕ್ಷೆ | (1975) |
| 58. | ಬಯಲು ದಾರಿ | (1976) |
| 59. | ವಿಜಯವಾಣಿ | (1976) |
| 60. | ಇದು ನಮ್ಮ ದೇಶ | (1976) |
| 61. | ರಾಜ ನರ್ತಕಿಯ ರಹಸ್ಯ | (1976) |
| 62. | ವಂಶಜ್ಯೋತಿ | (1978) |
| 63. | ಅನುರಾಗ ಬಂಧನ | (1978) |
| 64. | ಮಲೆಯ ಮಕ್ಕಳು | (1978) |
| 65. | ಸಂಧರ್ಭ | (1978) |



# ಕಲ್ಪನಾ ಅಂತರಾಳ

(ಗೌರಿ ಸುಂದರ್ ನೆಡೆಸಿದ ವಿಶೇಷ ಸಂದರ್ಶನ)



ಯಾವುದೋ ಒಂದು ಸಮಾರಂಭ. ಅಂದಿನ ಮುಖ್ಯ ಅತಿಥಿ ಕಲ್ಪನಾ. ಪ್ರೇಕ್ಷಕನಾಗಿ ಹೋಗಿದ್ದ ನನಗೆ ಬಿಚ್ಚು ಮನಸ್ಸಿನ ಕಲ್ಪನಾರ ಮಾತು ತುಂಬಾ ಹಿಡಿಸಿತು. ಚಿತ್ರ ರಂಗದ ಮಿತ್ರರಲ್ಲಿ ಸಾಕಷ್ಟು ಪರಿಚಿತನಾಗಿರುವ ನಾನು ಕಲ್ಪನಾ ಹಾಗೂ ಅವರ ಭಾಷಣವನ್ನು ಹೊಗಳಿದಾಗ ನಾನು ಮೂಡಿಸಿಕೊಂಡ ಭಾವನೆಗಳು ಸುಳ್ಳಾಗುವಂತೆ, ನನಗೆ ನನ್ನ ಅನಿಸಿಕೆಗಳ ಬಗ್ಗೆ ಅನುಮಾನ ಬರುವಂತೆ ಇವರೆಲ್ಲಾ ಮಾತನಾಡಿದಾಗ, ಹೊಸಬನಾದ ನಾನು ಈ ಮಾತುಗಳನ್ನು ನಂಬಬೇಕಾಯಿತು.

ಇದ್ದಕ್ಕಿದ್ದಂತೆ ಸಿನಿಮಾ ತೆಗೆಯಲು ಹೊರಟ ನನಗೆ ಕಲ್ಪನಾ ತಲೆಯಲ್ಲಿ ಬಂದರೂ "ಆಕೆ ಸೆಟ್ ಮೇಲೆ Co-operateಮಾಡೊಲ್ಲ, ಟೈಂ keepup ಮಾಡೊಲ್ಲ, ಹೊಸ ಟೈರೆಕ್ಟರ್ ಎಂದರೆ ನೀರು ಕುಡಿಸುತ್ತಾರೆ. ಕೆಲವೇ ನಟರ ಜೊತೆ ಮಾತ್ರ ಅಭಿನಯಿಸುವುದು, ದುರಹಂಕಾರಿ, ಶ್ರೀಮಂತಿಕೆಯ ಸೊಕ್ಕು" ಎಂದು ಅವರಿವರು ನುಡಿದ ಮಾತುಗಳು ನನ್ನ ಸ್ಮೃತಿಪಟಲದ ಮೇಲೆ ಅಪ್ಪಳಿಸಿದವು. ಒಬ್ಬರಲ್ಲ-ಇಬ್ಬರಲ್ಲ ಮೂರು ನಾಲ್ಕು ಮಂದಿ ಈ ಮಾತನ್ನು ಹೇಳಿದಾಗ ಇವರನ್ನು ಮುಖತಃ ಭೇಟಿಯಾಗುವುದನ್ನೇ ಬಿಟ್ಟೆ. ಆದರೆ ಇಂಥ ಸಂದರ್ಭ ತಾನಾಗೇ ಒದಗಿ ಬಂತು. ಗೆಳೆಯ ಮೂರ್ತಿ ಯವರೊಂದಿಗೆ "ಹೀಗಂತೆ" ಎಂದಿದ್ದಕ್ಕೆ "ಅವೆಲ್ಲಾ ಇರಲಿ. ಸುಮ್ಮನೆ ನನ್ನೊಂದಿಗೆ ಬನ್ನಿ" ಎಂದು ಖುದ್ದಾಗಿ ಕಲ್ಪನಾರವರಲ್ಲಿಗೆ ಕರೆದೊಯ್ದು ಪರಿಚಯಿಸಿದರು. (ಸಮಾರಂಭದಲ್ಲಿ ನಾನು ನೋಡಿದ್ದಕ್ಕೂ "ಸಂದರ್ಭ"ಕ್ಕಾಗಿ ನೋಡುವ ವೇಳೆಗೂ ಸುಮಾರು ಮೂರು ವರ್ಷಗಳೇ ಕಳೆದು ಹೋಗಿದ್ದವು) ಅಂದು ದೀಪಾವಳಿ, ರಾತ್ರಿ 10.30ರಲ್ಲಿ ಆದರದ ಸ್ವಾಗತ, ವಿಜಯಾ-ಕಲ್ಪನಾ- ಮೂರ್ತಿ ಮಾತನಾಡುತ್ತಿದ್ದಾಗ ಮೂಕ ಪ್ರೇಕ್ಷಕನಾಗಿದ್ದು, ಬಿಸಿದೋಸೆಯನ್ನು ತಿಂದೆನಾದರೂ, ಈಕೆಯ ಬಿಸಿ ಮಾತು, ನೇರಮಾತು,

ಹೇಳಿದ್ದನ್ನೆಲ್ಲಾ ಒಪ್ಪಿಕೊಳ್ಳದೆ ಸಮರ್ಥನೆ ನೀಡಿ ವಾದಿಸುವ ಸಾಮರ್ಥ್ಯ ನಮ್ಮ ಕಲಾವಿದರಲ್ಲಿ ಎಷ್ಟು ಮಂದಿಗಿದೆ ಎಂಬ ಪ್ರಶ್ನೆ ನನ್ನಲ್ಲಿ ಉದ್ಭವಿಸಿತು.

ಇವರ ಬಗ್ಗೆ ಬರೆಯಬೇಕು ಎಂದುಕೊಂಡಿದ್ದ ನನಗೆ "ರೂಪತಾರಾ" ಕಲ್ಪನಾರನ್ನು "ಇಂಟರ್‌ವ್ಯೂ" ಮಾಡಿ ಎಂದಾಗ ಈಗಷ್ಟೆ ಮಾತಾಡಿದ ಈ ಹೊಸ ಕಲ್ಪನಾರನ್ನು ಏನು ಪ್ರಶ್ನೆ ಕೇಳಲಿ ಎಂಬ ಆತಂಕ ನನ್ನಲ್ಲಿ ಉಂಟಾದರೂ, ನಾನು ಅವರ ಬಗ್ಗೆ ಕೇಳಿದ "ಮಾತು"ಗಳನ್ನೆ ಏಕೆ ಕೇಳಬಾರದು ಎನಿಸಿ ಪ್ರಶ್ನೆ ಪಟ್ಟಿ ಮುಂದೆ ಇಟ್ಟಾಗ ಒಂದಿಷ್ಟೂ ಬೇಸರಗೊಳ್ಳದೇ "ಇದಕ್ಕೆ ತಕ್ಕ ಉತ್ತರ ನೀಡಬಲ್ಲೇ. ನಿಮಗೆ ಅದು Direct ಆಗಿದ್ದರೂ, ನಿಮ್ಮ ಪ್ರಶ್ನೆಗಳಿಗೆ ಸ್ಫೂರ್ತಿಯಾಗಿ, ಹಿಂದೆ ಮಾತನಾಡುವ ಬಾಯಿಗಳು ಮುಚ್ಚಲಿ" ಎಂದು ಹೇಳಿ ಕೆಲವು ಕಡೆ ಖಾರವಾಗಿ ಹೇಳಿದ್ದಾರೆ. ಈ ಉತ್ತರದಿಂದಾದರೂ ಕಲ್ಪನಾರ ಬಗ್ಗೆ ಇಲ್ಲದ ಸಲ್ಲದ ಮಾತುಗಳು ನಿಲ್ಲಲಿ ಎಂದು



ನಾನೂ ಆಶಿಸುತ್ತೇನೆ. ಹೀಗೆ "ರೂಪತಾರಾ"ದಲ್ಲಿ ಪ್ರಕಟವಾದ ಸಂದರ್ಶನ ಬಹಷಃ ಕಲ್ಪನಾ ಅವರ ಕೊನೆಯ ಸಂದರ್ಶನ ನಂತರ ಅವರು 'ಬೆಳ್ಳಿ ಮೋಡ' ಅಂಚಿನಲ್ಲಿ 'ಮಿನುಗುತಾರೆ'ಯಾಗಿ ಮಾಯವಾದರು. ಈಗ ಮೂವತ್ತು ವರ್ಷಗಳ ನಂತರ ಈ ಸಂದರ್ಶನವನ್ನು ಪುಸ್ತಕಕ್ಕೆ ಪೂರಕವಾಗಿ ನೀಡುತ್ತಿದ್ದೇನೆ ಆ ಮೂಲಕ ಕಲ್ಪನಾ ಮತ್ತೆ ನಿಮ್ಮೊಂದಿಗೆ ಮಾತಿಗಿಳಿದಿದ್ದಾಳೆ.

**–ಗೌರಿಸುಂದರ್**

- **ಮಿನುಗಿ ಮಿನುಗುತ್ತಾ ಮಿನುಗುತಾರೆ ಆದ ನೀವು ಇದ್ದಕ್ಕಿದ್ದಂತೆ ಸುದ್ದಿಯಲ್ಲಿಲ್ಲದೇ ಹೋದಿರಲ್ಲಾ?**

- ಅಂದ್ರೆ..? ನೀವು ಅನ್ನೋದಾದ್ರೂ ಏನು ಸ್ವಾಮೀ...ಸುದ್ದೀಲಿರುವಂಥಾ ಬುದ್ಧಿ ಶಕ್ತಿ ನಿಮ್ಗೆ ಇಲ್ದೇ ಹೋದ್ರೇ...ನಾನು ಹೇಳ್ತೀನಿ ಕೇಳಿ...

  ...ವಿಧಾನ ಸೌಧನೋ... ಇಲ್ಲಾ Utility Building ನಿಂದ್ಲೋ ಹಾರಿ ಪ್ರಾಣ ಕಳ್ಕೊಳ್ಳಿ....ಇಲ್ಲಾ ಓಡೋರೈಲಿಗೆ ತಲೆಕೊಟ್ಟಿ ಆತ್ಮಹತ್ಯೆ ಮಾಡ್ಕೊಳ್ಳಿ. ಇದಕ್ಕೆಲ್ಲಾ ಧೈರ್ಯಸಾಲ್ದು ಅಂತೀರಾ... O K ಹೀಗೆ ಮಾಡಿ. Production No.1 ನಾನು ನಿರ್ಮಾಪಕಿಯಾಗಿ, ನಿರ್ದೇಶಕಳಾಗಿ ನಟಿಯಾಗಿ, ತೆಗೆಯಲಿರುವ ಚಿತ್ರದಲ್ಲಿ ನನಗೆದುರಾಗಿ ನಟಿಸಲು ನಾಯಕಿ, ಖಳನಾಯಕಿ, ಉಪನಾಯಕ, ನಾಯಕಿಯರ... I am sorry ಮರೆತೆ...ಹಾಸ್ಯ ಪಾತ್ರಧಾರಿಗಳಿಬ್ಬರ ಅವಶ್ಯಕತೆಯೂ ಇದೆ. ಈ ಪಾತ್ರಗಳೆಲ್ಲದ್ದಕ್ಕೂ "ಹೊಸ ಮುಖ"ಗಳನ್ನು ಹಾಕಲು ನಿರ್ಧರಿಸಿದ್ದೇನೆ. ಆಸಕ್ತಿ ಇರುವವರು ಈ ವಿಳಾಸಕ್ಕೆ ನಿಮ್ಮ ವವಧ ಭಾವ ಭಂಗಿಗಳ Photo ಸಹಿತ ದಿನಾಂಕ... ರಂದು... ರವೇಳೆಗೆ ಬಂದು ಭೇಟಿಯಾಗಿ ಎಂದು ಸ್ಥಳೀಯ ಪತ್ರಿಕೆಗಳಲ್ಲೆಲ್ಲಾ ಪ್ರಚಾರ ಮಾಡಿ...ಒಂದಿಷ್ಟು ಸಹನೆ ತಗೊಂಡು interview ಮಾಡಿ.... ಅಷ್ಟರಲ್ಲಿ ಸಾಕಷ್ಟು ಪ್ರಚಾರ ಸಿಗುತ್ತೆ. ಕನಿಷ್ಟ ಒಂದು ತಿಂಗಳವರೆಗಾದರೂ ನಿತ್ಯ ಒಂದಲ್ಲ ಒಂದು ರೀತೀಲಿ ನಿಮ್ಮ ಹೆಸರು ಬರ್ತಾ ಇರುತ್ತೆ. ಆಮೇಲೆ ನೀವು Picture ಮಾಡ್ತೀರೋ ಬಿಡ್ತೀರೋ that is immeterial.

  I am sorry. ನನ್ನ ಆಯ್ಕೆಗೆ ಸರಿಹೊಂದುವಂಥಾ ಯಾವ ಮುಖವೂ ನನಗೆ ಸಿಗಲಿಲ್ಲ. so, ಸದ್ಯ ನಿರ್ಮಾಣ ಕಾರ್ಯವನ್ನು ಅನಿರ್ದಿಷ್ಟ ಕಾಲದವರೆಗೆ ಮುಂದೂಡಿದ್ದೇನೆ. ಅಂತ ಇನ್ನೊಂದು publicity ಕೊಡಿ. ಸರಿ...ಶುರುವಾಗುತ್ತೆ ನೋಡಿ ಓದುಗರ Column ನಲ್ಲಿ ಸರಿ... ತಪ್ಪು ಅನ್ನೋ ಟೀಕೆ ವಿಮರ್ಶೆಗಳು ಬರೋದಿಕ್ಕೆ. ಬರ್ಲಿಬಿಡಿ Why do you bother.ಒಟ್ನಲ್ಲಿ Purpose serve ಆದ ಹಾಗೆ ಆಗುತ್ತೋ ಇಲ್ವೋ...? ಯಾವುದೋ ಒಂದು ರೀತೀಲಿ ಹೆಸರು ಹಾರಾಡುತ್ತೋ ಇಲ್ವೋ....? ಏನಂತೀರಾ?" ಅಂತ್ಲೆ...?

  ಸ್ಸರಿ...ಸ್ವಾಮೀ, ಒಟ್ನಲ್ಲಿ "ಹ್ಯಾಗಾದ್ರೂ ಸರಿ ಸುದ್ದೀಲಿ ಇರಿ" ಅಂತಾನೋ ನಿಮ್ಮ ಅಭಿಪ್ರಾಯ. Well, agree with you; ours is a show business. Publicity is a must here. ಹಾಗಂತ ಹೇಗೇಗೋ ನಡ್ಕೊಂಡು, ಏನೇನೋ ಮಾಡ್ಕೊಂಡು ಪ್ರಚಾರ ಗಿಟ್ಟಿಸ್ಕೊಂಡ್ರೆ ಎನು ಸುಖ ಸ್ವಾಮಿ.....

You see,ಯಾವ ಕೆಲ್ಸಾನಾದ್ರೂ ಸರಿ... ನೋಡ್ದೋರು, ಕೇಳ್ದೋರು... 'ಸೈ' ಅನ್ನೋಂಥಾ ಕೆಲ್ಸ ಮಾಡಿ (of course ನಿಷ್ಪಕ್ಷಪಾತಿಗಳು, ನಿಸ್ವಾರ್ಥಿಗಳು) ಸುದ್ದೀಲಿರಬೇಕೇ ವಿನಾ ಹ್ಯಾಗದ್ರೂ ಸರಿ ಪ್ರಚಾರದಲ್ಲಿ ಮಾತ್ರ ಇರಬೇಕು. ಯಾವತ್ತು ಇರಬೇಕು ಅನ್ನೋ ಜಾಯಮನದವಳು ನಾನಲ್ಲ. ಒಳ್ಳೇದನ್ನೇ ಮಾಡಬೇಕು. ಚರ್ವಿತ ಚರ್ವಣಕ್ಕೆ ಅಸ್ಪದವಿರಬಾರದು. ಮುಂದೆ ಮಾಡುವಂಥಾದ್ದು ಹಿಂದಿನದನ್ನು ಮೀರಿಸುವಂತಿರಬೇಕು.

Quality ಏರುತ್ತ ಹೋಗಬೇಕೇ ವಿನಾ ಇಳಿಯಬಾರದು. ಸದಭಿರುಚಿ, ಸಂಸ್ಕೃತಿಗಳ ಪ್ರತೀಕಗಳಾಗಿರಬೇಕು. ನನ್ನ ಕೃತಿ ಕರ್ಮಗಳು ನೋಡ್ದೋರ ಮನತೃಪ್ತಿಯಾಗಿ 'ಇನ್ನೂ ಅಷ್ಟುಕಾಲ ಬಾಳಮ್ಮ' ಅಂತ ಆಶೀರ್ವಾದ ಮಾಡುವಂಥ ಕೆಲ್ಸಗಳನ್ನು ಮಾತ್ರ ಮಾಡಬೇಕು ಅನ್ನೊ ಆಸೆ ನನಗೆ ಹೇರಳವಾಗಿದ್ದರೂ, ಧರ್ಮಕರ್ಮ ಸಂಯೋಗವಿದ್ದರೆ ಮಾತ್ರ ಇವೆಲ್ಲ ಸಾಧ್ಯ ಅನ್ನೋದರಲ್ಲಿ ಅಪಾರ ನಂಬಿಕೆ ಇರುವವಳು ನಾನು. ಹಾಗೆಂದು ಆಲಸಿಯಲ್ಲ! ಪ್ರಯತ್ನ ಕೈ ಬಿಡುವವಳೂ ಅಲ್ಲ.

So, it`s quite obvious you see. A to Z "Class" ಆಗಿರ್ಬೇಕು ಅಂತ ಆಸೆಪಡೋದು ಪ್ರತಿಯೊಂದು ಸಂದರ್ಭಗಳಲ್ಲೂ ಅಸಾಧ್ಯವೆನಿಸಿದರೂ, 70% ಆದ್ರೂ ಚೆನ್ನಾಗಿರ್ಬೇಕು. ಅಂತ ಆಸೆಪಡೋ ನಾನು ತಕ್ಕ ಕಾಲಕ್ಕೆ ಕಾಯಲೇ ಬೇಕು. ಅದನ್ನ ಒಟ್ಟು "ಸುದ್ದೀಲಿಲ್ವಲ್ಲಾ" ಅಂತ ಬುದ್ಧಿ ಕೆಡಿಸಿಕೊಂಡು ಯದ್ವಾ-ತದ್ವಾ ವರ್ತಿಸಿದರೆ...ನೀವೇ ಊಹಿಸಿಕೊಳ್ಳಿ ಏನಾಗಬಹುದೂಂತ.. ಯಾರು ಏನು ಬೇಕಾದ್ರೂ ಅಂದ್ಕೊಳ್ಳಿ, ನಾನಂತೂ "ಸುದ್ದಿಗೊಂದು ಮಾಧ್ಯಮ ಇದು" ಅನ್ನೋ ದೃಷ್ಟಿಯೊಂದನ್ನೇ ಇಟ್ಟುಕೊಂಡು ನಾನೆಂದೂ ಯಾವುದನ್ನು ಮಾಡಿಲ್ಲ. ಮಾಡೋದೂ ಇಲ್ಲ.

- **ನಿಮಗೆ ಗೊತ್ತಿರುವ ಮಂದಿಗೆ ನೀವು ನಕ್ಕಾಗ ಏನೂ ಅನಿಸದೆ ಹೊಸಬರಿಗೆ ಅಪ್ಯಾಯಮಾನವಾಗಿ ಕಂಡರೂ ಜಾಸ್ತಿ ಎನಿಸುತ್ತಲ್ಲಾ...?**

"ಹೊಸಬರಿಗೆ" ಅಂತ ನೀವೇ ಅಂದ ಬಳಿಕ "ನನ್ನ" ನಗು ಏನು ನಡೆ-ನುಡಿ, ಉಡಿಗೆ-ತೊಡಿಗೆ, ಆಚಾರ-ವಿಚಾರ, ರೀತಿ-ನೀತಿ ಹೀಗೆ ಸಕಲವೂ ಅಪ್ಯಾಯಮಾನವಾಗಿ ಕಂಡುಬಂದರೆ ಆಶ್ಚರ್ಯವೇನೂ ಇಲ್ಲ.

ಇನ್ನು, ಕೃತಕತೆ? well mr. gowrisunder ನೀಲಿ ಗಾಜು ಹಾಕಿಕೊಂಡಿರೋರ ಕಣ್ಣಿಗೆ ತಾವು ಕಾಣ್ತಿರೋದೆಲ್ಲ ನೀಲಿಯಾಗೇ ಕಾಣಿಸುತ್ತೆ ಅನ್ನೋ ನಾಣ್ನುಡಿ ಕೇಳಿರಬೇಕಲ್ಲವೇ ನೀವು?

- **ನಿಮ್ಮ ದಿಟ್ಟತನ ಖಂಡಿತವಾದ ಮಾತು ಕೇಳಿದಾಗ "ಭೇಷ್" ಎನ್ನುವಂತಾದರೂ ಇವೆಲ್ಲದರ ಹಿಂದೆ ಸಾಕಷ್ಟು frustrations ಇದೆಯಲ್ಲವೇ?**

○ "Frustrations", Nonsense ! sorry to frustrate you. **ಶರಪಂಜರದ ನೈಜ ಅಭಿನಯಕ್ಕೆ ನಿಮ್ಮ ಜೀವನದ ಮಹತ್ವದ ಘಟನೆಗಳು ಪೂರಕವೇ?**

ಶರಪಂಜರ ನೈಜ ಅಭಿನಯ?Let me thank you for the compliments. ಇದಕ್ಕೆ ನನ್ನ ಜೀವನ ಯಾವ ರೀತಿಯಲ್ಲೂ ಪೂರಕವಲ್ಲ- ಮಣ್ಣಾಂಗಟ್ಟೇನೂ ಅಲ್ಲ. ದಿಗ್ದರ್ಶಕ ಶ್ರೀ ಪುಟ್ಟಣ್ಣ ಕಣಗಲ್ ಅವರ ಸ್ಫೂರ್ತಿದಾಯಕ, ಚೇತನ ಯುಕ್ತ ದಿಗ್ದರ್ಶನವೇ ನನ್ನನ್ನು "ಕಾವೇರಿ" ಪಾತ್ರದಲ್ಲಿ ತಲ್ಲೀನಳಾಗಿಸಿ, ಮೈ ಮರೆತು ಅಭಿನಯಿಸುವಂತಾಗಿಸಿತೆಂದರೆ ಅತಿಶಯೋಕ್ತಿ ಎನಿಸಲಾರದು.

- **ದೀನ ದಲಿತರ ಬಗ್ಗೆ ಉದಾರವಾಗಿ ಮಾತನಾಡುವ ನೀವು, ನಿಮ್ಮ ವೈಭವ- ಅಟ್ಟಹಾಸ ಕಂಡಾಗ ನೀವೊಬ್ಬ ಹಿಪೋಕ್ರೇಟ್ ಎನಿಸುತ್ತದೆ. ಹೌದೆ?**

○ "ಭೇಷ್!ಭೇಷ್!ತಾವು ಕಲ್ತಿರೋ ಶಬ್ಧಗಳನ್ನೆಲ್ಲಾ ಪ್ರಯೋಗಿಸಿಯೇ ಬಿಡೋಣ ಉಚಿತಾನುಚಿತಗಳ ಬಗ್ಗೆ ಆಮೇಲೆ ಯೋಚ್ನೆ ಮಾಡೋಣ ಅನ್ನೋ ನಿರ್ಧಾರ ಮಾಡ್ಕೊಂಡೇ ನಮ್ಮಲ್ಲಿಗೆ ಬಂದಿರೋ ಹಾಗಿದೆ.

ಪರವಾಗಿಲ್ಲ ಸ್ವಾಮೀ... ನಿಮ್ಮ ಚಿತ್ರದಲ್ಲಿ ನಾನು ಯಾಕೆ ನಟಿಸಿದೆ? ಯಾವ ಪ್ರತಿಫಲಾಪೇಕ್ಷೆಯಿಂದ ನಟಿಸಿದೆ? ನಮ್ಮ ಮನೆಗೆ ನೀವು "ಅತಿಥಿ"ಯಾಗಿ ಬಂದಾಗ ನಿಮ್ಮ ಹಿಂದು-ಮುಂದು ಏನು? ಅನ್ನೋ ಜಾತಕ ನನಗೆ ಗೊತ್ತಿಲ್ದೆ ಹೋದ್ರೂ ನಿಮ್ಮನ್ನ ಯಾವ ರೀತಿ ಬರಮಾಡಿಕೊಂಡೆ, ಪುರಸ್ಕರಿಸಿದೆ- ಅನ್ನೋದು ನಿಮ್ಮ ಸ್ವಾನುಭವಕ್ಕೆ ಬಂದ ಮೇಲೂ, ಸೌಜನ್ಯತೆಯನ್ನು ಮೀರಿ, ಔಚಿತ್ಯವನ್ನು ಗಣನೆಗೆ ತಾರದೆ, "ವೈಭವ", "ಅಟ್ಟಹಾಸ", "ಹಿಪೊಕ್ರೇಟ್", ಅಂತ ನನ್ನ ಅಭಿಮಾನಿಗಳ ದೃಷ್ಟಿಯಲ್ಲಿ ನನ್ನ ವ್ಯಕ್ತಿತ್ವಕ್ಕೆ ಧಕ್ಕೆ ಬರುವಂಥ ಪದಗಳನ್ನು ಬಳಸಿಕೊಂಡಿರುವುದನ್ನು ನೋಡಿದ್ರೆ ನಿಮ್ಮನ್ನು ಏನೂಂತ ಹೆಸರಿಸಬೇಕು ಅಂತ ಅಂದ್ರೆ..ಛೇ...ಛೇ... ಬೇಡ ಬಿಡಿ. ವಿಚಾರಹೀನರಾಗಿ ನೀವೇನೋ ಅಂದ್ರೀ ಅಂತ ನಾನ್ಯಾಕೆ ನಿಮ್ಮನ್ನು ಪ್ರತಿಯಾಗಿ ಅನ್ನೋಕೆ ಹೋಗಲಿ. Anywy I feel sorry for your ignorence. What do you mean ?

- **ಕತೆ–ನಿರ್ದೇಶನ–ಅಭಿನಯ ಒಂದಕ್ಕೊಂದು ಪೂರಕವಾದರೂ ನಿಮ್ಮ ದೃಷ್ಟಿಯಲ್ಲಿ ಯಾವುದು ಮುಖ್ಯ?**

○ ಇವರೆಲ್ಲರನ್ನೂ ಒಂದುಗೂಡಿಸಿ ಚಿತ್ರ ತೆಗೆಯೋ ನಿರ್ಮಾಪಕರ ಅದೃಷ್ಟ ಮುಖ್ಯ ಪಾಪ! 7.1/2 ಶನಿ ಕಾಲ ನಡೀತಾ ಇದ್ರೆ ಎಂಥಾ ಪ್ರಭಾವಶಾಲಿಗಳನ್ನೆ ಹಾಕಲಿ... ಏನೂ ಪ್ರಯೋಜನವಿಲ್ಲ ಸ್ವಾಮೀ... ನಸೀಬು ಚೆನ್ನಾಗಿರೋವರ್ರೂಗೆ ಎಲ್ರೂ ನವಾಬರೇ.

- **ನೇರವಾಗಿ ಮಾತನಾಡುವ, ಸೊಗಸಾಗಿ ಮಾಡ್ ಡ್ರೆಸ್ ಮಾಡುವ ನಿಮ್ಮ ಮನೆಯಲ್ಲಿ ನನ್ನೆತ್ತರದ "ದೀಪದಕಂಬ" ಅಂದರೆ, ದೇವರು ಅಷ್ಟೊಂದು ಮುಖ್ಯವೇ?**

○ what do you mean? ಅಂದ್ರೆ..."ದೇವರು" ಅನ್ನೋದರಲ್ಲಿ ನಂಬಿಕೆ

ಇಲ್ದೇ ಇರೋರು ಮಾತ್ರ ನೇರವಾಗಿ ಮಾತಾಡ್ತಾರೆ, ಸೊಗಸಾಗಿ Mod dress ಮಾಡ್ಕೋತಾರೆ–ಅಂತಾನೇ? How Silly,

ನೀನೊಲಿದರೆ ಕೊರಡು ಕೊನರುವುದಯ್ಯ ನೀನೊಲಿದರೆ ಬರಡು ಹಯನಹುದಯ್ಯ ನೀನೊಲಿದರೆ ವಿಷವು ಅಮೃತವಹುದಯ್ಯ

ಸ್ವಾಮೀ, ಈ ಕೊರಡನ್ನು ಕೊನರಿಸು! ಈ ಬರಡನ್ನು ಹಯನಾಗಿಸು! ಈ ವಿಷವನ್ನು ಅಮೃತವನ್ನಾಗಿಸು! ಅನ್ನೋದೇ ಶ್ರೀ ಗುರುವಿನಲ್ಲಿ ನನ್ನ ಇಪ್ಪತ್ನಾಲ್ಕು ಘಂಟೆಗಳ ಮೊರೆ ಸ್ವಾಮೀ!

- **ಶ್ರೇಷ್ಠ ನಟರ ಜೊತೆ ಒಳ್ಳೆ ಚಿತ್ರಗಳಲ್ಲಿ ಮಾಡಿ, ನಿಮ್ಮನ್ನೇ ನೀವು ರೂಪಿಸಿಕೊಂಡಿದ್ದರೂ ಹೊಸ ಅಲೆಯ ಚಿತ್ರಗಳಲ್ಲಿ ಅದೂ ಗಿರೀಶ್ ಕರ್ನಾಡ್ ಜೊತೆಯಲ್ಲಿ ಅಭಿನಯಿಸುವ ಆಸೆಗೆ ಕಾರಣ?**

○ ಆಸೆ....ಛೇಛೇಛೇ, ನಿಮ್ಗೆ ಬೇರೆ ಪದವೇ ಸಿಗಲಿಲ್ಲವೇ? ಇಲ್ಲಾ.... ಉಪಯೋಗಿಸೋದಕ್ಕೆ ಮನಸ್ಸೇ ಬರಲಿಲ್ಲವೆ....?

"ಆಸೆ" ಅನ್ನೋ ತಮ್ಮ ಪದ ಪ್ರಯೋಗ ಈ ಸಂದರ್ಭದಲ್ಲಿ ವಿನಾಕಾರಣವಾಗಿ ಅಲ್ಲ ಸಲ್ಲದ ಅಪಾರ್ಥಗಳಿಗೆ ಕಾರಣವಾಗುತ್ತೆ ಅನ್ನೋದರ ಬಗ್ಗೆ ತಾವು ಯೋಚಿಸಿಯೇ ಇಲ್ಲ ಅಂತ ಕಾಣಿಸುತ್ತೆ. ಪಾಪ! ಇನ್ನೊಬ್ಬರ ಗೌರವಕ್ಕೆ ಚ್ಯುತಿ ಬಂದರೆ "ನಮ್ಮ ಗಂಟೇನು ಹೋಗೋದು" ಅನ್ನೋರ ಗುಂಪಿನವರಿರಬೇಕು ನೀವು.

verry sorry, I never expected this from you. anyway....

ಇಷ್ಟುಮಾತ್ರ ಹೇಳಬಲ್ಲೆ. "ಆಸೆ" ಅನ್ನೋ ಪದಾನ ನೀವು ಅನಗತ್ಯವಾಗಿ ಉಪಯೋಗಿಸಿ ನನ್ನ ಗೌರವಮಾತ್ರವಲ್ಲ ಶ್ರೀ ಗಿರೀಶರ ಗೌರವಕ್ಕೂ ಕುಂದು ತಂದಿದ್ದೀರ, ನಾನು ನೋಡಿದ ಅವರ ಒಂದೆರಡು ಚಿತ್ರ–ಪಾತ್ರಗಳು, ಅವರು ಬರೆದ ಕೆಲವೊಂದು ನಾಟಕ, ಲೇಖನಗಳು, ಅವರಿವರ ಬಾಯಲ್ಲಿ ಕೇಳಿ ತಿಳಿದ ವಿಷಯಗಳಿಂದಾಗಿ ನಾನು ಗೌರವಾದರಗಳನ್ನು ಬೆಳೆಸಿಕೊಂಡಿರೋ ಬೆರಳೆಣಿಸುವಷ್ಟು ವ್ಯಕ್ತಿಗಳಲ್ಲಿ ಶ್ರೀ ಗಿರೀಶರೂ ಒಬ್ಬರು. ನನ್ನ ಅವರ ಪರಸ್ಪರ ಪರಿಚಯ ಒಂದೆರಡು ನಿಮಿಷಗಳದಷ್ಟೇ.

ಆದರೆ ನೀವಂದುಕೊಂಡಂತೆ "ಆಸೆ" ಅನ್ನೋ "ಭಾವ" ಹುಟ್ಟಿಸುವಂಥ ಯಾವ ಪರಿಣಾಮಕಾರೀ ಪ್ರಸಂಗವೂ ನಮ್ಮಿಬ್ಬರ ಮಧ್ಯೆ ಇದುವರೆಗೂ ನಡೆದಿಲ್ಲ.

ಸಂದರ್ಭವಶಾತ್ ನಿರ್ಮಾಪಕರೊಬ್ಬರು "ನಿಮ್ಮನ್ನೂ, ಗಿರೀಶರನ್ನೂ ನನ್ನ ಮುಂದಿನ ಚಿತ್ರದಲ್ಲಿ ಸೇರಿಸಿಕೊಳ್ಳಬೇಕೆಂದಿದ್ದೇನೆ.ಕಾಲ್ ಶೀಟ್ ಕೊಟ್ತೀರಾ ತಾನೇ" ಎಂದು ಕೇಳಿದಾಗ "Why not ? I would like to" ಅಂತ ಸ್ವಾಭಾವಿಕ, ಸಹಜವಾದ ಸತ್ಯ ಉತ್ತರವನ್ನು ಸಂದರ್ಭಕ್ಕನುಗುಣವಾಗಿ ಕೊಟ್ಟೆನೇ ವಿನಾ, ಈ ರೀತಿ ಪ್ರಸಂಗವನ್ನು ಉಂಟುಮಾಡುತ್ತೆ ಅನ್ನೋ ಅರಿವು ಕೊಂಚ ಮಾತ್ರ ನನ್ನಲ್ಲಿ ಮೂಡಿದ್ದರೂ... ಹೋಗಲಿ ಬಿಡಿ– ಈಗ ತಲೆ ಕೆಡಿಸಿಕೊಂಡೇನು ಪ್ರಯೋಜನ? Any way ತುಂಬಾ thanks. ಈ ರೀತಿ ಅಪಪ್ರಚಾರ ತನ್ನ ಪ್ರಭಾವನ್ನು ಸಾಕಷ್ಟು ಕೆಟ್ಟದಾಗಿ ಬೀರೋಕೆ ಮುಂಚೆ ನನ್ನ ಪ್ರಶ್ನೆ ಕೇಳಿ ಉತ್ತರ ಪಡೆದು ಸಮಸ್ಯೆ ತೀರುವಂತೆ ಮಾಡಿದ್ರಲ್ಲ....

I am greatful to you.

ಇನ್ನು ಚಿತ್ರಗಳಲ್ಲಿ ನಟಿಸೋದನ್ನೇ ಉದ್ಯೋಗವೆಂದು ಆರಿಸಿಕೊಂಡಾದ ಮೇಲೆ "ಹೊಸ ಅಲೆ" ಆದರೇನು? "ಹಳೆ ತೆರೆ" ಆದರೇನು? ಪರಿಣಾಮ ಮಾತ್ರ ವೈಯಕ್ತಿಕ ಧ್ಯೇಯಗಳಿಗೆ ಧಕ್ಕೆ ತರುವಂತಾಗದಿದ್ದರೆ ಸರಿ!

- **ಪ್ರಸ್ತುತ ರಾಜಕೀಯ, ಏಕದಂ ಮೇಲೇರಿ, ದುಡುಂ ಬಿದ್ದು, ಹಾಸ್ಯಕ್ಕೆ ಗುರಿಯಾದ ಇಂದಿರಾಗಾಂಧಿ, ಎಮರ್ಜನ್ಸಿ ಬಗ್ಗೆ ನಿಮ್ಮ ಅನಿಸಿಕೆ?**

○ ಪ್ರಸ್ತುತ ರಾಜಕೀಯ? ಪಾಪ ರಾಜ್ಯ ಉಳಿದರೆ ತಾನೇ ಆಳೋದಕ್ಕೆ ಅವಕಾಶ. ಎಲ್ಲೆಲ್ಲೂ ಅತಿವೃಷ್ಟಿ–ಇಲ್ಲಾ ಅನಾವೃಷ್ಟಿ, ಕೆಲವು ಕಡೆ ನೆರೆ ಹಾವಳಿ; ಹಲವು

ಕಡೆ ಬಿರುಗಾಳಿ, ಸುಂಟರಗಾಳಿ, ಸಾವು, ನೋವು... ಗೋಳು. ರಾಜ್ಯಭಾರ ಮಾಡೋದನ್ನ ಬಿಟ್ಟು "ದೇಹಿ"ಅಂತ ಅಲೆಯೋ ದುಸ್ಥಿತಿ ಮುಖಂಡರಿಗೆ.

ಇನ್ನು ಇಂದಿರಾಗಾಂಧಿ ...ಯಾರು...? Oh! ಹೌದಲ್ಲ. ಹಾಗಂತ ಒಬ್ರು ಇದ್ರಲ್ಲ...? ಏನಂದ್ರಿ ಇನ್ನೂ ಇದ್ದಾರೆ ಅಂದ್ರಾ...? ಹೌದೌದು. ಈಗ ಜ್ಞಾಪಕಕ್ಕೆ ಬಂತು ನೋಡಿ! ಪಾಪ, ಆಂಧ್ರಕ್ಕೆ "ಇದೇ ಸರಿಯಾದ ಸಮಯ ಸಹತಾಪ ಸಂಪಾದಿಸಿಕೊಳ್ಳೋದಿಕ್ಕೆ" ಅಂತ ಕಣ್ಣೀರು ಸುರಿಸಿ ಬಂದ್ರಂತಲ್ಲ! ಊರೇ ಮುಳುಗಿಸೋಕೆ ನೀರು ಸಾಲದೂಂತ! ಎಷ್ಟೇ ಆಗಲಿ ಹೆಣ್ಣು, ಹೊಂಗರುಳು, ಕಣ್ಣೀರನ್ನು ಈ ರೀತಿಲಾದ್ರೂ, ನಾನಾ ಕಾರಣಕ್ಕೆ ಲಕ್ಷಾಂತರ ಮಂದಿಯ ಕಣ್ಣೀರಿಳಿಸಿದ ಕಣ್ಣು ತಾನೇ ಕಣ್ಣೀರು ಸುರಿಸುವಂತಾಯಿತು.

ಇನ್ನು ಎಮರ್ಜೆನ್ಸಿ ನಡಿಯೋ ಕಾಲಕ್ಕೆ "ಇನ್ನಿಲ್ಲ" ಅನ್ನೋವಷ್ಟು ಜೋರಾಗೇ ನಡೀತು. ಬಿದ್ದ ಕಾಲಕ್ಕೆ "ಇನ್ನಿಲ್ಲ" ಅನ್ನೋವಷ್ಟು ಜೋರಾಗಿ ಬಿತ್ತು.

ಅಂತೂ ಮಾಡ್ದೋರ ಪಾಪ ಆಡ್ದೋರ ತಲೆ ಮೇಲೆ ಅಂತ ನಮಗ್ಯಾಕೆ ಸುಂದರರೇ ಈ ಕಾಷ್ಠವ್ಯಸನ? ಇಬ್ಬರ ಜಗಳ ಮೂರನೆಯವನಿಗೆ ಆದಾಯ ಅಂತ ಆಗ್ದೇ, ಪಾಪಿಯೋ ಪುಣ್ಯವಂತನೋ ಒಟ್ನಲ್ಲಿ ನಮ್ಮವರೇ ನಮ್ಮನ್ನ ಆಳಿ, ಎಲ್ಲಾದ್ರೂ ಬದುಕ್ಕೊಳ್ಳಿ.

- **ಶಿವರಾಮ ಕಾರಂತರ "ಕುಡಿಯರ ಕೂಸು"ವಿನ "ಸೂಳೆ" ಪಾತ್ರ ನಿಮಗೆ ಹಿಡಿಸಲು ಕಾರಣ?**

○ You have mistaken, ಯಾರೋ ತಮಗೆ ತಪ್ಪಾಗಿ ಅಭಿಪ್ರಾಯ ಕೊಟ್ಟಿದ್ದಾರೆ. ಶ್ರೀ ಕಾರಂತರ ಚಿತ್ರದಲ್ಲಿ ನನ್ನದು "ಕೆಂಪಿ" ಪಾತ್ರ. ಹಿರಿಮಲೆ ಗುರಿಕಾರನ ಮಗಳ ಪಾತ್ರ. "ಸೂಳೆ" ಪಾತ್ರ ಅಲ್ಲ.

Any way ಕೆಂಪೀನ ನೀವು "ಸೂಳೆ" ಅಂತ ಅಂದ್ಕೊಳ್ಳೋದೆ ಆದ್ರೆ Well,no objection. "ಸೂಳೆ" ಪಾತ್ರ ನಾನೆಂದೂ ಮಾಡಿಲ್ಲ. ಮಾಡೋದು ಇಲ್ಲ ಅಂತ ನಾನೆಲ್ಲೂ ಹೇಳಿಕೊಂಡಿಲ್ಲ. statement ಕೊಟ್ಟಿಲ್ಲ.

ಅಂತೂ..."ಹೊಟ್ಟೆ ಉರಿ" ನಾಲಿಗೇಲಿ ಏನನ್ನ ಬೇಕಾದ್ರೂ ನುಡಿಸುತ್ತೆ.

- **ಅವಾರ್ಡ್‌ಗಳ ಬಗ್ಗೆ ಕಾಮೆಂಟ್ಸ್, ಅಕಸ್ಮಾತ್ ನೀವೇ ದೇಶದ "ಉತ್ತಮ ನಟಿ" ಎಂಬ ಪ್ರಶಸ್ತಿ ಬಂದರೆ...?**

○ (a) No Comments!

(b) ಅಕಸ್ಮಾತ್ ನನಗೆ ದೇಶದ ಉತ್ತಮ ನಟಿ ಪ್ರಶಸ್ತಿ ಬಂದರೆ..? Well... ಈ ಆಕಸ್ಮಿಕ ಅನ್ನೋ ಅಚಾತುರ್ಯ ಈ ವರ್ಷ ನಡೆಯಿತೆಂದರೆ... ದೇವರಾಣೆ ತಮ್ಮ "ಸಂದರ್ಭ"ದಲ್ಲಿನ ನನ್ನ ಪಾತ್ರಕ್ಕೆ ಬರಬೇಕು ನೋಡಿ.....

ಇದಕ್ಕೆ ಕೊಡೋ ದೊಡ್ಡ ಮನಸ್ಸು ಕಮಿಟಿಯವರಿಗೆ ಸಹಜವಾಗಿ ಬಂದ್ರೆ jolly well...ತಗೋಳೋಣ ಬಿಡಿ. ಒಂದ್ಸಲ ಹಾಯಾಗಿ ದಿಲ್ಲಿ ನೋಡ್ಕೊಂಡು ಬಂದ ಹಾಗೆ ಆಗುತ್ತೆ; ಪ್ರಚಾರನೂ ಯದ್ವಾ-ತದ್ವಾ ಸಿಗುತ್ತೆ.

ಇನ್ನೂ ಎಂಥಾದಕ್ಕೆ ಕೊಡ್ಬೇಕಯ್ಯ? ಅಂತ ಇನ್ನು ಹಲವರ ವಾದ.

ಒಟ್ಟಿನಲ್ಲಿ ಯಾವುದೊ ಒಂದು ರೀತೀಲಿ ಎಲ್ಲರ ಬಾಯ್ನಲ್ಲೂ ಕಲ್ಪನಾ...ಕಲ್ಪನಾ....ಕಲ್ಪನಾ...ಮಜವೋ....ಮಜ!

● **ಇಂಥಾ ಭವ್ಯಾ(ಭೂತಾ)ಕಾರದ ಮನೆಯಲ್ಲಿ "ಒಂಟಿತನ" ನಿಮಗೆ ಒಗ್ಗಿದೆಯೆ? ಅಥವಾ ದೊಡ್ಡಸ್ತಿಕೆಯೆ?**

○ ಎಲ್ಲಿ... ನೀವು ಹಾಕಿಕೊಂಡಿರೋ ಕನ್ನಡ್ಕ ಸ್ವಲ್ಪ ಕೊಡಿ!

ಅಂಥಾದ್ದೇನೂ ವಿಶೇಷ ಇಲ್ವಲ್ಲ! ದೃಷ್ಟಿ ದೋಷದ ಮಾಮೂಲು ಕನ್ನಡಕನೇ... You know ನಾನೆಲ್ಲೋ ನೀವು ಭೂತಕನ್ನಡಿ ಬಳಸ್ತೀರೇನೋ ಅಂತ ಅಂದ್ಕೊಂಡಿದ್ದೆ.

ಅಲ್ರೀ...ಮತ್ತೆ ಏನೋ ಅಲ್ಪ ಸ್ವಲ್ಪ ಉದ್ದಗಲ ಜಾಸ್ತಿ ಇರೋ ಮಾತ್ರಕ್ಕೆ "ಭೂತಾಕಾರ" ಅನ್ನೋ ಔಚಿತ್ಯವೇನು?... ನನಗರ್ಥವಾಗ್ತಾ ಇಲ್ಲ. ನಾಲಿಗೆ...ಏನೋ ಹೇಳ್ತು ಅಂತಾರಲ್ಲ ಹಾಗಿದೆ ನಿಮ್ಮ ಮಾತು.

ಅಲ್ರೀ.. ಈ ಮನೇಲಿ ನಾನ ಒಂಟಿ ಅಂತ ನಿಮಗ್ಯಾರು ಹೇಳಿದ್ರು? ಹಿಂದು ಮುಂದು ಯೋಚನೆ ಇಲ್ದೆ "ಒಂಟಿತನ ಒಗ್ಗಿದೆಯೆ?ಇಲ್ಲ ನಿಮ್ಮ ದೊಡ್ಡಸ್ತಿಕೆಯೇ" ಅಂತ ಕೇಳ್ತಿದ್ದೀರಲ್ಲ.

Of course,ಪ್ರಥಮ ಪರಿಚಯದಲ್ಲೇ ನೀವು ಇಷ್ಟೊಂದು ಸಲಿಗೆ ತೆಗೆದುಕೊಂಡು 'ದೊಡ್ಡಸ್ತಿಕೆ' ಅನ್ನೋ ಪದ ಬಳಸೋವಷ್ಟು. ಔದಾರ್ಯ ನಾನು ನಿಮಗೆ ತೋರಿಸಿದ್ದೀನಿ ನೊಡಿ, ಅದು ನನ್ನ ದೊಡ್ಡಸ್ತಿಕೆ! (ಅರ್ಥಾತ್ ದೊಡ್ಡ ಗುಣ. ಅದಕ್ಕೆ ಸಂಸ್ಕಾರಬೇಕು ಅಲ್ಲವೇ?)

For your kind information Sir, ನೀವು ಮಾತ್ರ ಅಂದುಕೊಂಡಂಥ



ಈ ಭೂತಾಕಾರದ ಮನೆಯಲ್ಲಿ ನನ್ನ ಸ್ವಂತ ಆತ್ಮೀಯ ಬಂಧುಗಳು ಇದ್ದಾರೆ. ಎಲ್ಲಕ್ಕೂ ಮಿಗಿಲಾಗಿ ನನಗೆಂದೂ ಎರಡು ಬಗೆಯದ ನನ್ನ Prince, Robin ಗಳಿದ್ದಾವೆ. (ಏನು ಹಾಗೆ ಮಿಕ-ಮಿಕ ನೋಡ್ತಿದ್ದೀರ? Boy friends ಅಂದ್ಕೊಂಡ್ರಾ...? ನನ್ನ ಪ್ರೀತಿಯ ನಾಯಿಗಳ ಹೆಸರು ಸ್ವಾಮೀ!) ಸಮಯಕ್ಕೆ ಸಹಾಯಕ್ಕೊದಗುವ ನೆರೆ ಹೊರೆಯವರಿದ್ದಾರೆ. ಆಗಾಗ ಬಂದು ಹೋಗುವ ಆಪ್ತ ಸ್ನೇಹಿತರಿದ್ದಾರೆ. ಅತಿಥಿಗಳೂ ಬರುತ್ತಾರೆ ಎಂದಾದರೊಮ್ಮೆ.

ಆದರೆ... ಅನಾವಶ್ಯಕವಾಗಿ ತಮ್ಮ ಅಗತ್ಯವಿಲ್ಲದಿದ್ದರೂ "ಬಂದೋರು ಯಾರು?" ಅನ್ನೋದನ್ನ ತಿಳ್ಕೊಳ್ಳೋ ಕುತೂಹಲದಿಂದ "ಏನು ಕರೆದ್ರಾ?" ಅನ್ನೋ ನೆಪ ಮಾಡಿಕೊಂಡು ಬಂದ ಅತಿಥಿಗಳ ಮುಂದೆವಿನಾಕಾರಣವಾಗಿ ಓಡಿಯಾಡೋ, ಹರಟೆ ಹೊಡಿಯೋ ಜಾಯಮಾನದ ವ್ಯಕ್ತಿಗಳು ಈ "ಅನುಗ್ರಹ"ದಲ್ಲಿ ಇಲ್ಲಾಂತ ಬಹಳ ಆತ್ಮವಿಶ್ವಾಸ, ಆತ್ಮ ಗೌರವದಿಂದ ಹೇಳ್ತಾ ಇದ್ದೀನಿ.

- **"ಸಂದರ್ಭ"ಚಿತ್ರದಲ್ಲಿ ಕತೆಗಾರ್ತಿಯಾಗಿ ಅಭಿನಯಿಸಲು ಒಪ್ಪಿದ್ದಕ್ಕೆ ಕಾರಣ?**

○ ಕನ್ನಡ ಚಿತ್ರೋದ್ಯಮದ "Touch" ಈ ಮೂಲಕವಾದರೂ ಮತ್ತೆ ಬೆಳೀಲಿ ಅಂತ. ತೃಪ್ತಿಯಾಯಿತೆ?

❄ ❄ ❄ ❄ ❄

